**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ದೇವರಶಿಗಿಹಳ್ಳಿ ಮತ್ತು ಕಾದ್ರೊಳ್ಳಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**2) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಕಿತ್ತೂರಿನಲ್ಲಿ ನಿರ್ಮಿಸಲು ಯೋಜಿಸಲಾದ 110 ಕೆ.ವಿ. ವಿದ್ಯುತ್ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ಈಗಿರುವ ನರೇಂದ್ರ-ಬೆಳಗಾವಿ 110ಕೆ.ವಿ. ಜೋಡಿ ಮಾರ್ಗದಿಂದ ಲಿಲೋ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಸಿರಸೂರ ಮತ್ತು ಕಿತ್ತೂರ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**3) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಉಡಕೇರಿ (ಬೆಳವಡಿ)ಯಲ್ಲಿ ಹೊಸದಾಗಿ ನಿರ್ಮಿಸಲು ಯೋಜಿಸಲಾದ 110 ಕೆ.ವಿ. ವಿದ್ಯುತ್ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ನಿರ್ಮಾಣ ಮಾಡಲು ಯೋಚಿಸಲಾದ 220 ಕೆ.ವಿ. ಸವದತ್ತಿ ವಿದ್ಯುತ್ ಕೇಂದ್ರದಿಂದ ಜೋಡಿ ಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಸವದತ್ತಿ, ಕರಿಕಟ್ಟಿ, ಸುತ್ತಗಟ್ಟಿ, ಏಣಗಿ, ಉಡಕೇರಿ ಮತ್ತು ಬೆಳವಡಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**4) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನ ಬೀಡಿಯಲ್ಲಿ ಹೊಸದಾಗಿ ನಿರ್ಮಿಸಲು ಯೋಜಿಸಲಾದ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ಈಗಾಗಲೇ ನಿರ್ಮಾಣ ಮಾಡಲು ಯೋಚಿಸಲಾದ 220 ಕೆ.ವಿ. ಎಂ.ಕೆ. ಹುಬ್ಬಳ್ಳಿ ವಿದ್ಯುತ್ ಕೇಂದ್ರದಿಂದ ಬೀಡಿ ವರೆಗೆ ಜೋಡಿ ಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ದೇವರಶಿಗಿಹಳ್ಳಿ, ಕಾದ್ರೊಳ್ಳಿ, ಮಾರ್ಗನಕೊಪ್ಪ, ಇಟಗಿ, ಗಂದಿಗವಾಡ, ತೋಲಗಿ, ಮುಗಳಿಹಾಳ ಮತ್ತು ಬೀಡಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**5) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನ ಎಂ.ಕೆ. ಹುಬ್ಬಳ್ಳಿಯಲ್ಲಿ ನಿರ್ಮಿಸುತ್ತಿರುವ 220 ಕೆ.ವಿ. ವಿದ್ಯುತ್ ಕೇಂದ್ರದಿಮದ ಈಗಿರುವ ನರೇಂದ್ರ-ಬೆಳಗಾವಿ 110ಕೆ.ವಿ. ಪ್ರಸರಣ ಮಾರ್ಗಕ್ಕೆ 110 ಕೆ.ವಿ. ಜೋಡಿ ಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ದೇವರಶಿಗಿಹಳ್ಳಿ ಮತ್ತು ಕಾದ್ರೊಳ್ಳಿ, ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**6) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನಲ್ಲಿ ಈಗಾಗಲೇ ನಿರ್ಮಾಣ ಮಾಡಲು ಯೋಚಿಸಲಾದ 220 ಕೆ.ವಿ. ಎಂ.ಕೆ. ಹುಬ್ಬಳ್ಳಿ ವಿದ್ಯುತ್ ಕೇಂದ್ರದಿಂದ ಈಗಿರುವ ಎಂ.ಕೆ. ಹುಬ್ಬಳ್ಳಿ-ಬೈಲಹೊಂಗಲ 110ಕೆ.ವಿ. ಪ್ರಸರಣ ಮಾರ್ಗಕ್ಕೆ 110 ಕೆ.ವಿ. ಜೋಡಿ ಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ದೇವರಶಿಗಿಹಳ್ಳಿ ಮತ್ತು ಕಾದ್ರೊಳ್ಳಿ, ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**7) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ ಈಗಾಗಲೇ ನಿರ್ಮಾಣ ಮಾಡಲು ಯೋಜಿಸಲಾದ 220 ಕೆ.ವಿ. ಸವದತ್ತಿ ವಿದ್ಯುತ್ ಕೇಂದ್ರದಿಂದ ಈಗಿರುವ ಸವದತ್ತಿ-ಯರಗಟ್ಟಿ 110ಕೆ.ವಿ. ಪ್ರಸರಣ ಮಾರ್ಗಕ್ಕೆ 110 ಕೆ.ವಿ. ಜೋಡಿ ಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಸವದತ್ತಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**8) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ತವಶಿ (ಬಾಳಿಗೇರಿ)ಯಲ್ಲಿ ನಿರ್ಮಾಣಮಾಡಲು ಯೋಚಿಸಲಾದ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ನಿರ್ಮಿಸಲು ಯೋಚಿಸಲಾದ ಅಥಣಿ 220 ಕೆ.ವಿ ವಿದ್ಯುತ್ ಕೇಂದ್ರದಿಂದ ಜೋಡಿ ಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಅಥಣಿ, ಪಾರಥನಹಳ್ಳಿ, ಗುಂಡೆವಾಡಿ ಮತ್ತು ಬಾಳಿಗೇರಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

**9) ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಅಥಣಿ ತಾಲ್ಲೂಕಿನ ಸತ್ತಿಯಲ್ಲಿ ನಿರ್ಮಾಣ ಮಾಡಲು ಯೋಜಿಸಲಾದ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ಈಗಿರುವ ಮಹಾಲಿಂಗಪುರ-ಅಥಣಿ 110ಕೆ.ವಿ. ಮಾರ್ಗದಿಂದ ಲಿಲೋ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಕೈಗಾರಿಕಾ ಪ್ರದೇಶದಲ್ಲಿ ಹಾಗೂ ನಗರ ಮತ್ತು ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಸತ್ತಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

ಮೇಲಿನ ಯೋಜನೆಗಳನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯಿದೆ (1885 ರ 13) ಭಾಗ-III ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಈ ಯೋಜನೆಗಳ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯ ನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ ನೆಹರು ನಗರ ಬೆಳಗಾವಿ-10 ಇವರಿಗೆ ಪ್ರಕಟಣೆ ಪ್ರಕಟವಾದ ದಿನಾಂಕದಿಂದ 2 ತಿಂಗಳ ಒಳಗೆ ತಲುಪುವಂತೆ ಕಳೂಹಿಸಿಕೊಡಬೇಕು.

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಬೃಹತ್ ಕಾಮಗಾರಿ ವಿಭಾಗ, ನೆಹರು ನಗರ, ಬೆಳಗಾವಿ-10.

ಪಿ.ಡಿ.72

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ, ಆನಂದರಾವ್ ವೃತ್ತ, ಬೆಂಗಳೂರು-09
## ಪ್ರಕಟಣೆ

**ಸಂಖ್ಯೆ: ಇಇಇ/ ಬೆಂ.ವೃ.ಕಾ.ಉ.ವಿ/ ಎಇಇ-2/ ಕ-79/ 05-06/ 3437-39, ದಿನಾಂಕ:24ನೇ ಮಾರ್ಚ್, 2006**

ಕ.ವಿ.ಪ್ರ.ನಿ.ನಿ.ಯ 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 28ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣ 29(II)ರ ಅನ್ವಯ ಈ ಮೂಲಕ ಯೋಜನೆಗಳನ್ನು ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಗಳ ವಿವರಗಳು ಈ ರೀತಿ ಇವೆ.

**1) ಯೋಜನೆ ಹೆಸರು:** ಬೆಂಗಳೂರು ನಗರದ ಆನಂದ್‌ರಾವ್ ವೃತ್ತದಲ್ಲಿರುವ 'ಎ' ವಿದ್ಯುತ್ ಉಪಕೇಂದ್ರದ ಆವರಣದಲ್ಲಿ 2x150 ಎಂ.ವಿ.ಎ, 220/ 66 ಕೆ.ವಿ. ವಿದ್ಯುತ್ ಕೇಂದ್ರವನ್ನು ಸ್ಥಾಪಿಸುವ ಸಂಬಂದ ಮತ್ತು 220/ 66 ಕೆ.ವಿ. ಎನ್.ಆರ್.ಎಸ್. ರಾಜಾಜಿನಗರ ವಿದ್ಯುತ್ ಕೇಂದ್ರದಿಂದ ಉದ್ದೇಶಿತ 'ಎ' ವಿದ್ಯುತ್ ಕೇಂದ್ರದ 220/ 66 ಕೆ.ವಿ. ಕೇಂದ್ರಕ್ಕೆ 220 ಕೆ.ವಿ. ಭೂಗತ ಕೇಬಲ್ ಅಳವಡಿಸುವುದು.

**2) ಯೋಜನೆಯ ಪ್ರಯೋಜನಗಳು:** ಬೆಂಗಳೂರು ನಗರದ ಸೆಂಟ್ರಲ್ ಕಾಲೇಜು, ಕಂಠೀರವ ಕ್ರೀಡಾಂಗಣ ಮತ್ತು ಸುತ್ತಮುತ್ತ ಪ್ರದೇಶಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) 220 ಕೆ.ವಿ. ಭೂಗತ ಕೇಬಲ್ ಹಾದು ಹೋಗುವ ರಸ್ತೆ/ ಪ್ರದೇಶ ಪರಿಷ್ಕೃತ:** ಎನ್.ಆರ್.ಎಸ್. ಆವರಣ- ರಾಜಾಜಿನಗರ 2ನೇ ಬ್ಲಾಕ್ ಕೆ.ಇ.ಬಿ. ರಸ್ತೆ, ಇ.ಎಸ್.ಐ. ಆಸ್ಪತ್ರೆರಸ್ತೆ, ಡಾ: ರಾಜ್‌ಕುಮಾರ್ ರಸ್ತೆ, ರಾಜಾಜಿನಗರ ಪ್ರದೇಶ ಸುಜಾತ ಚಿತ್ರಮಂದಿರ ರಸ್ತೆ, ರೈಲ್ವೆ ಸಮಾನಾಂತರ ರಸ್ತೆ, ರಿಸಲ್ದಾರ್ ರಸ್ತೆ, ಕಿನೋ ಚಿತ್ರ ಮಂದಿರ ರಸ್ತೆ, ಕ.ವಿ.ಪ್ರ.ನಿ.ನಿ. ಆವರಣ.

**4) ಅಂದಾಜು ವೆಚ್ಚ:** ರೂ. 4179.52 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ-III ರ (ಕೇಂದ್ರೀಯ ಕಾಯ್ದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಕಾರ್ಯನಿವಾಹಕ ಇಂಜಿನಿಯರ್ (ವಿ), ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ, ಕ.ವಿ.ಪ್ರ.ನಿ.ನಿ., ಆನಂದರಾವ್ ವೃತ್ತ, ಬೆಂಗಳೂರು-09 ಇವರಿಗೆ ಕಳುಹಿಸುವುದು.

**ಟಿ.ಎನ್. ಬೆಟ್ಟಸ್ವಾಮಿ**
ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೆಂಗಳೂರು ಬೃಹತ್ ಕಾಮಗಾರಿ ಉತ್ತರ ವಿಭಾಗ,
ಕ.ವಿ.ಪ್ರ.ನಿ.ನಿ. ಆನಂದರಾವ್ ವೃತ್ತ, ಬೆಂಗಳೂರು-09.

ಪಿ.ಡಿ.73

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಕಾರ್ಯನಿರ್ವಾಹಕ ಅಭಿಯಂತರರು, ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ರವರ ಕಛೇರಿ
## ಪ್ರಕಟಣೆ

**ಸಂಖ್ಯೆ: ಕಾನಿಅ/ ಬೃ.ಕಾವಿ/ ಗು/ ಸಕಾಅ(ಒ)/ 2005-06/ 2409, ದಿನಾಂಕ:12ನೇ ಜನವರಿ, 2006**

ವಿದ್ಯುತ್ ಪೂರೈಕೆ ಅಧಿನಿಯಮ 1948 ಸೆಕ್ಷನ್ 28 ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಯೋಜನೆಗಳನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ.

**1) ಯೋಜನೆಯ ಹೆಸರು:** ಅಫಜಲಪುರ್ ತಾಲ್ಲೂಕಿನ ಕರಜಗಿ ಗ್ರಾಮದಲ್ಲಿ 110/ 33/ 11 ಕೆ.ವಿ. ವಿದ್ಯುತ್ ಸ್ಥಾವರವನ್ನು ಸ್ಥಾಪಿಸುವ ಮತ್ತು 110 ಕೆ.ವಿ. ಅಫಜಲ್‌ಪುರ್ ವಿದ್ಯುತ್ ಕೇಂದ್ರದಿಂದ ಪ್ರಸ್ತಾವಿತ 110 ಕೆ.ವಿ. ಕರಜಗಿ ವಿದ್ಯುತ್ ಕೇಂದ್ರಕ್ಕೆ 19.27 ಕಿ.ಮೀ.ಗಳ ದೂರ 110 ಕೆ.ವಿ. ಸಿಂಗಲ್ ಸರ್ಕ್ಯೂಟ್ ಮಾರ್ಗವನ್ನು ಡಬಲ್ ಸರ್ಕ್ಯೂಟ್ ಗೋಪುರಗಳ ಮೇಲೆ ಲಿಂಕ್ಸ್ ಕಂಡಕ್ಟರ್ ಉಪಯೋಗಿಸಿ ವಿದ್ಯುತ್ ಮಾರ್ಗವನ್ನು ನಿರ್ಮಿಸುವುದು.

**2) ಯೋಜನೆಯ ಪ್ರಯೋಜನಗಳು:** ಕರಜಗಿ, ಮಣ್ಣೂರ, ಮಾಶ್ಯಳ ಮತ್ತು ಅಕ್ಕ-ಪಕ್ಕದ ಗ್ರಾಮಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) ಹಾದು ಹೋಗುವ ಪ್ರದೇಶಗಳು:** ಅಫಜಲಪುರ್, ಶಿರವಾಳ, ಗೌರ(ಬಿ), ಗೌರ (ಕೆ), ಡಿಕ್‌ಸಂಗಾ, ಮಾಶ್ಯಾಳ ಹಾಗೂ ಕರಜಗಿ.

**4) ಅಂದಾಜು ವೆಚ್ಚ:** ರೂ.1156.49 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಯನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯ್ದೆ (1885ರ 13) ಭಾಗ 3ರ ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ನಿಗಮವು ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಯ ಬಗ್ಗೆ ಆಕ್ಷೇಪಣೆಗಳೂ ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯನಿರ್ವಾಹಕ ಅಭಿಯಂತರರು, (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ಗುಲ್ಬರ್ಗಾ ಇವರಿಗೆ ಈ ಪ್ರಕಟಣೆ ಪ್ರಕರವಾದ ದಿನಾಂಕದಿಂದ ಎರಡು ತಿಂಗಳುಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಸ್ಥಳ: ಗುಲ್ಬರ್ಗಾ.
ತಾ: ಕಾರ್ಯನಿರ್ವಾಹಕ ಅಭಿಯಂತರರು (ವಿ),
ಪಿ.ಡಿ.74 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಗುಲ್ಬರ್ಗಾ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ
## ಕಾರ್ಯನಿರ್ವಾಹಕ ಇಂಜಿನೀಯರ್‌ರವರು, ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ., ರವರ ಕಛೇರಿ, ದಾವಣಗೆರೆ
## ಪ್ರಕಟಣೆ

**ಸಂಖ್ಯೆ: ಕಾನಿಇಂ/ ಬೃಕಾವಿ/ ದಾ/ ಸಕಾನಿಇಂ (ಕ)/ 3895, ದಿನಾಂಕ:25ನೇ ಮಾರ್ಚ್, 2006**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣದ 28ರ ಅನ್ವಯ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ನಿಯಮದ ಪ್ರಕರಣ 29(2)ರ ಅನ್ವಯ ಈ ಮೂಲಕ ಕೆಳಗೆ ಕೊಟ್ಟಿರುವ ಯೋಜನೆಗಳನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸುತ್ತದೆ. ಯೋಜನೆಗಳ ವಿವರಗಳು ಈ ರೀತಿ ಇವೆ.

| ಕ್ರ. ಸಂ. | ಯೋಜನೆಯ ಹೆಸರು | ಹಾದು ಹೋಗುವ ಹಳ್ಳಿಗಳು | ಅಂದಾಜು ವೆಚ್ಚ |
|---|---|---|---|
| 1. | 66 ಕೆ.ವಿ. ಜೋಡಿ ಪ್ರಸರಣ ಮಾರ್ಗವನ್ನು ಹಾಲಿ 66/11 ಕೆ.ವಿ. ಹೊಳಲ್ಕೆರೆ ಉಪ ಕೇಂದ್ರದಿಂದ ಹಾಲಿ ಇರುವ 66/11 ಕೆ.ವಿ. ರಾಮಗಿರಿ (ಜಿ. ಚಿತ್ರದುರ್ಗ) ಉಪ ಕೇಂದ್ರದವರೆಗೆ ಉದ್ದೇಶಿತ ಮಾರ್ಗದ ಉದ್ದ (12.95 ಕಿ.ಮೀ.) | ಹೊಳಲ್ಕೆರೆ, ಅವಳಹಟ್ಟಿ, ಗುಂಡೇರಿ ಸರಹದ್ದು, ಸುಕೇನಹಳ್ಳಿ, ರಾಮಗಿರಿ. | 208 ಲಕ್ಷಗಳು |
| 2. | 220 ಕೆ.ವಿ. ಜೋಡಿ ಪ್ರಸರಣ ಮಾರ್ಗವನ್ನು ಹಾಲಿ ಇರುವ 400 ಕೆ.ವಿ. ಹಿರಿಯೂರು (ಬೀರೇನಹಳ್ಳಿ) ಉಪಕೇಂದ್ರದಿಂದ ಉದ್ದೇಶಿತ 220/ 66 ಕೆ.ವಿ. ತಳಕ ಉಪಕೇಂದ್ರದವರೆಗೆ, (ಜಿ.ಚಿತ್ರದುರ್ಗ), ಉದ್ದೇಶಿತ ಮಾರ್ಗದ ಉದ್ದ (60.481 ಕಿ.ಮೀ.) ಹಾಲಿ | ಚೀರನಹಳ್ಳಿ, ಮ್ಯಾಸಂದ್ರ, ದಾಸಯ್ಯಾನಮಾಳಿಗೆ, ತವಂದಿ, ಸುರನೇನಹಳ್ಳಿ, ಗಿಡ್ಡಬೆನಹಳ್ಳಿ, ಅರಳಿಕಟ್ಟೆ, ಚಳವಟ್ಟಿ, ಬಸಪ್ಪನಮಾಳಿಗೆ, ಸೊಂಡೆಗೆರೆ, ಪಲ್ಲವಗೆರೆ, ಚಿಕ್ಕಮಾಧರ, ಬಾಳೇನಹಳ್ಳಿ, ಕುರಡಹಳ್ಳಿ, ರಾಮಜೋಗಿಹಳ್ಳಿ, ನನ್ನಿವಾಳ್, ಪೆಟ್ಟಿಮನವರಹಟ್ಟಿ, ಬೋರಪಹಟ್ಟಿ, ನೇರಲಗುಂದಿ, ಚಿಕ್ಕಮ್ಮನಹಟ್ಟಿ, ವರವೂ, ತಳಕ. | 2097 ಲಕ್ಷಗಳು |
| 3. | 220/ 66 ಕೆ.ವಿ. ತಳಕನಲ್ಲಿಯ (ಜಿ. ಚಿತ್ರದುರ್ಗ), ಉದ್ದೇಶಿತ ವಿದ್ಯುತ್ ಉಪಕೇಂದ್ರಕ್ಕೆ ಸಂಬಂಧಿಸಿದ 66 ಕೆ.ವಿ. ಲಿಂಕ್ ಲೈನ್‌ಗಳು, ಉದ್ದೇಶಿತ ಮಾರ್ಗದ ಉದ್ದ (2.0 ಕಿ.ಮೀ.) | ಹಾಲಿ ತಳಕನಲ್ಲಿರುವ 66 ಕೆ.ವಿ. ವಿದ್ಯುತ್ ಉಪಕೇಂದ್ರದ ಸುತ್ತಮುತ್ತಲಿನ ಪ್ರದೇಶ. | 25 ಲಕ್ಷಗಳು |
| 4. | 66 ಕೆ.ವಿ. ಲಿಲೋ ಪ್ರಸರಣ ಮಾರ್ಗವನ್ನು ಹಾಲಿ ಇರುವ 66 ಕೆ.ವಿ. ಎಂ.ಎಸ್.ಡಿ. ಪೂನಬ್ ಘಟ್ಟ್ ಟ್ಯಾಪ್‌ಲೈನನಿಂದ ಉದ್ದೇಶಿತ 66/ 11 ಕೆ.ವಿ. ಉಚ್ಚಂಗಿದುರ್ಗ ದಾವಣಗೆರೆ) ವಿದ್ಯುತ್ ಉಪಕೇಂದ್ರಕ್ಕೆ ಉದ್ದೇಶಿತ ಮಾರ್ಗದ ಉದ್ದ (0.75 ಕಿ.ಮೀ.) | ಉಚ್ಚಂಗಿದುರ್ಗದ ಸರಹದ್ದು. | 10 ಲಕ್ಷಗಳು |
| 5. | 66 ಕಿ.ವಿ. ಲಿಲೋ ಪ್ರಸರಣ ಮಾರ್ಗವನ್ನು ಹಾಲಿ ಇರುವ ದಾವಣಗೆರೆ ಚಿತ್ರದುರ್ಗ ನಂ.2 ಲೈನಿನಿಂದ ಉದ್ದೇಶಿತ 66/ 11 ಕೆ.ವಿ. ಆನಗೋಡು (ತಾ: ದಾವಣಗೆರೆ) ವಿದ್ಯುತ್ ಉಪಕೇಂದ್ರಕ್ಕೆ, ಉದ್ದೇಶಿತ ಮಾರ್ಗದ ಉದ್ದ (0.21 ಕಿ.ಮಿ.) | ಆನಗೋಡು ಸರಹದ್ದು. | 15 ಲಕ್ಷಗಳು |
| 6. | 66 ಕೆ.ವಿ. ಒಂಟಿ ವಿದ್ಯುತ್ ಪ್ರಸರಣ ಮಾರ್ಗವನ್ನು ಹಾಲಿ ಇರುವ 66 ಕೆ.ವಿ. ಪರಶುರಾಮಪುರ- ತಳಕ ಲೈನನಿಂದ ಟ್ಯಾಪ್ ಮಾಡಿ- ಉದ್ದೇಶಿತ ಹಾಲಿ ಇರುವ ದ್ಯಾವರಹಳ್ಳಿ ವಿದ್ಯುತ್ ಉಪಕೇಂದ್ರಕ್ಕೆ ಎಳೆಯುವುದು. ಉದ್ದೇಶಿತ ಮಾರ್ಗ ಉದ್ದ (3.61 ಕಿ.ಮೀ.) | ಘಾವರಹಳ್ಳಿ, ಜುರಲಹಳ್ಳಿ, ಚಿನ್ನಮ್ಮ ನಾಗತಿಹಳ್ಳಿ ಸರಹದ್ದು. | 50 ಲಕ್ಷಗಳು |

| ಕ್ರ. ಸಂ. | ಯೋಜನೆಯ ಹೆಸರು | ಹಾದು ಹೋಗುವ ಹಳ್ಳಿಗಳು | ಅಂದಾಜು ವೆಚ್ಚ |
|---|---|---|---|
| 7. | 66 ಕೆ.ವಿ. ಒಂಟಿ ಮಾರ್ಗವನ್ನು ಹಾಲಿ ಇರುವ ಗೋಪುರದ ಮೇಲೆ (ಎನ್.ಆರ್.ಕಾನ್ ಮಾರ್ಗ) ಹಾಲಿ 66/ 11 ಕೆ.ವಿ. ಪಂಡರಹಳ್ಳಿ ವಿದ್ಯುತ್ ಉಪ ಕೇಂದ್ರದಿಂದ-ಚಿತ್ರದುರ್ಗ "4" ಪೋಲ್ ಸ್ಟ್ರಕ್ಚರ್ ವರೆಗೆ ಎಳೆಯುವುದು. | ಮಠದ ಕುರುಬರಹಟ್ಟಿ, ಚಿತ್ರದುರ್ಗ ಆಶ್ರಯ ಕಾಲೋನಿ, ಹತ್ತಿರ. | 54 ಲಕ್ಷಗಳು |
| 8. | 66 ಕೆ.ವಿ. ಜೋಡಿ ವಿದ್ಯುತ್ ಪ್ರಸರಣ ಮಾರ್ಗವನ್ನು ಹಾಲಿ 220/ 66 ಕೆ.ವಿ. ಹಿರಿಯೂರು ವಿದ್ಯುತ್ ಸ್ವೀಕರಣ ಕೇಂದ್ರದಿಂದ- ಉದ್ದೇಶಿತ 66/ 11 ಕೆ.ವಿ. ರಂಗನಾಥಪುರ ವಿದ್ಯುತ್ ಉಪಕೇಂದ್ರಕ್ಕೆ ಲೈನ್ ಎಳೆಯುವುದು. ಉದ್ದೇಶಿತ ಮಾರ್ಗ ಉದ್ದ (11.0 ಕಿ.ಮೀ.) | ಹಿರಿಯೂರು, ಹೊಂಬರಗೆರೆ, ಹೊಸಯಳನಾದು, ಪುಟ್ಟನಕಟ್ಟೆ, ಕಸವನಹಳ್ಳಿ, ಉಪ್ಪಲಗೆರೆ, ಸರಹದ್ದುಗಳು. | 99 ಲಕ್ಷಗಳು |
| 9. | 66 ಕೆ.ವಿ. ಜೋಡಿ ವಿದ್ಯುತ್ ಪ್ರಸರಣ ಮಾರ್ಗವನ್ನು ಉದ್ದೇಶಿತ 220/ 66 ಕೆ.ವಿ. ತಳಕ ವಿದ್ಯುತ್ ಕೇಂದ್ರದಿಂದ- ಉದ್ದೇಶಿತ 66/ 11 ಕೆ.ವಿ. ಗೌರಸಮುದ್ರ ವಿದ್ಯುತ್ ಉಪಕೇಂದ್ರಕ್ಕೆ ಲೈನ್ ಎಳೆಯುವುದು. ಉದ್ದೇಶಿತ ಮಾರ್ಗ ಉದ್ದ (15.0 ಕಿ.ಮೀ.) | ತಳಕ, ಗರಣಿ, ಬೇಡರಟ್ಟಿ ಹಳ್ಳಿ, ಚಿಕ್ಕಳ್ಳಿ, ಪಾಲಿನಾಯಕನಕಟ್ಟೆ, ಕರಿಬೋರನಹಟ್ಟಿ, ಮನ್ನೆಕೊಂಟೆ, ಕಾರೆಬೋರನಹಟ್ಟಿ, ಮಿಕ್ಕಾಂಬೆ, ಸರಹದ್ದು. | 180 ಲಕ್ಷಗಳು |
| 10. | 66 ಕೆ.ವಿ. ಲಿಲೊ ವಿದ್ಯುತ್ ಪ್ರಸರಣ ಮಾರ್ಗವನ್ನು ಹಾಲಿ ಇರುವ 66 ಕೆ.ವಿ. ದಾವಣಗೆರೆ-ಶಿವಮೊಗ್ಗ-1 ಮಾರ್ಗದಿಂದ ಟ್ಯಾಪ್ ಮಾಡಿ- ಉದ್ದೇಶಿತ 66/ 11 ಕೆ.ವಿ. ಭಾನುವಳ್ಳಿ ವಿದ್ಯುತ್ ಉಪಕೇಂದ್ರಕ್ಕೆ ಮಾರ್ಗವನ್ನು ಎಳೆಯುವುದು. ಉದ್ದೇಶಿತ ಮಾರ್ಗ ಉದ್ದ (0.78 ಕಿ.ಮೀ.) | ಏಕ್ಕಗುಂದಿ, ಹಳ್ಳಿಯ ಸರಹದ್ದು | 15 ಲಕ್ಷಗಳು |
| 11. | 66 ಕೆ.ವಿ. ಒಂಟಿ ವಿದ್ಯುತ್ ಪ್ರಸರಣ ಮಾರ್ಗವನ್ನು ಹಾಲಿ ಇರುವ ದಾವಣಗೆರೆ-ಶಿವಮೊಗ್ಗ-2 ಮಾರ್ಗದಿಂದ ಟ್ಯಾಪ್ ಮಾಡಿ- ಉದ್ದೇಶಿತ 66/ 11 ಕೆ.ವಿ. ದೇವರಬೆಳೆಕೆರೆ ವಿದ್ಯುತ್ ಉಪಕೇಂದ್ರಕ್ಕೆ ಮಾರ್ಗವನ್ನು ಎಳೆಯುವುದು. ಉದ್ದೇಶಿತ ಮಾರ್ಗ ಉದ್ದ (7.19 ಕಿ.ಮೀ.) | ಲದಡಿ, ಬೆತ್ತಲಕಟ್ಟೆ, ಮಾದ ಹದಡಿ, ದೇವರಬೆಳೆಕೆರೆ ಸರಹದ್ದು. | 84 ಲಕ್ಷಗಳು |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ-iii (ಕೇಂದ್ರಿಯ ಕಾಯ್ದೆ 1886ರ 13 ಅನ್ವಯ) ಅಧಿನಿಯಮ, ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಇಂಜಿನೀಯರರು (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಆರ್.ಹೆಚ್. ಬಿಲ್ಡಿಂಗ್, ಎರಡನೇ ಮಹಡಿ, ಪಿ.ಬಿ. ರಸ್ತೆ, ದಾವಣಗೆರೆ-02, ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನೀಯರ್ (ವಿ),
ಪಿ.ಡಿ.75 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ದಾವಣಗೆರೆ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಬೃಹತ್ ಕಾಮಗಾರಿ ವಿಭಾಗ, ತುಮಕೂರು

## ಪ್ರಕಟಣೆ

### ಸಂಖ್ಯೆ: ಕಾನಿಇಂ/ ಬೃಕಾವಿ/ ತು/ 05-06/ 17-18, ದಿನಾಂಕ:1ನೇ ಏಪ್ರಿಲ್, 2006

ಕ.ವಿ.ಪ್ರ.ನಿ.ನಿ. 1948ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 28 (ಎ) ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಗಳನ್ನು ರೂಪಿಸಿದೆ. ಹಾಗೂ ಸದರಿ ಯೋಜನೆಗಳನ್ನು ಲೈಸೆನ್ಸ್‌ದಾರರು ಮತ್ತು ಆಸಕ್ತರು ಯಾವುದೇ ಇತರ ವ್ಯಕ್ತಿಗಳ ತಿಳುವಳಿಕೆಗಾಗಿ ಸದರಿ ನಿಯಮದ ಪ್ರಕರಣ 29(11)ರ ಅನ್ವಯ ಈ ಮೂಲಕ ಪ್ರಕಟಿಸಲಾಗಿದೆ. ಯೋಜನೆಗಳ ವಿವರ ಈ ಕೆಳಕಂಡಂತಿವೆ.

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯ ಪ್ರಮುಖ ಲಕ್ಷಣಗಳು | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂಗಳಲ್ಲಿ) | ಹಾದುಹೋಗುವ ಪ್ರದೇಶ |
|---|---|---|---|---|
| 1. | ತುಮಕೂರು ತಾಲ್ಲೂಕು, ಬಡ್ಡಿಹಳ್ಳಿ ಗ್ರಾಮದಲ್ಲಿ (ಸರ್ವೆ ನಂ.44/2ರ) ಸ್ಥಾಪಿಸಲು ಉದ್ದೇಶಿಸಿರುವ 66/11 ಕೆ.ವಿ. ಉಪಸ್ಥಾವರಕ್ಕೆ ಹಾಲಿ ಇರುವ ಹಿರೇಹಳ್ಳಿ- ಮೆಳೇಕೋಟೆ ಮಾರ್ಗದಿಂದ 0.3 ಕಿ.ಮೀ. ಉದ್ದದ 66 ಕೆ.ವಿ. ಲಿಲೋ ಮಾರ್ಗ ಮತ್ತು ಉಪಸ್ಥಾವರ ನಿರ್ಮಾಣ. | 1. ಬಡ್ಡಿಹಳ್ಳಿ ಮತ್ತು ಸುತ್ತಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿ ನಷ್ಟವನ್ನು ಕಡಿಮೆಗೊಳಿಸುವುದು.<br>3. ಹಿರೇಹಳ್ಳಿ, ಮೆಳೇಕೋಟೆ, ತುಮಕೂರು ಉಪಸ್ಥಾವರಗಳ ಮೇಲಿನ ಒತ್ತಡವನ್ನು ಕಡಿಮೆಗೊಳಿಸುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 518.12. | ಬಡ್ಡಿಹಳ್ಳಿ |

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯ ಪ್ರಮುಖ ಲಕ್ಷಣಗಳು | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂಗಳಲ್ಲಿ) | ಹಾದುಹೋಗುವ ಪ್ರದೇಶ |
|---|---|---|---|---|
| 2. | ತಿಪಟೂರು ತಾಲ್ಲೂಕು, ಹುಣಸೇಘಟ್ಟ ಗ್ರಾಮದಲ್ಲಿ ನಿರ್ಮಿಸಲು ಉದ್ದೇಶಿಸಿರುವ 110/ 11 ಕೆ.ವಿ. ಉಪಸ್ಥಾವರಕ್ಕೆ ಹಾಲಿ ಇರುವ ತಿಪಟೂರು-ಅರಸೀಕೆರೆ ಮಾರ್ಗದಿಂದ 16.57 ಕಿ.ಮೀ. ಉದ್ದದ ಒಂಟಿ ಮಾರ್ಗದ ನಿರ್ಮಾಣ ಮತ್ತು ಉಪಸ್ಥಾವರ, ಹುಣಸೇಘಟ್ಟ ಗ್ರಾಮದಲ್ಲಿ ಸರ್ವೆ ನಂ.65/1, 65/ 2, 65/ 3, 66/ 1, 66/2 ರಲ್ಲಿ ನಿರ್ಮಿಸುವುದು. | 1. ಹುಣಸೇಘಟ್ಟ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿನ ನಷ್ಟವನ್ನು ಕಡಿಮೆಗೊಳಿಸುವುದು.<br>3. ತಿಪಟೂರು ಉಪಸ್ಥಾವರದ ಮೇಲಿರುವ ಅಧಿಕ ಒತ್ತಡವನ್ನು ಕಡಿಮೆ ಮಾಡುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 441.11 | ಗೊಲ್ಲರಹಟ್ಟಿ, ಮದನೂರು, ಹೊನ್ನೇನಹಳ್ಳಿ, ತಾಡಸೂರು, ಮೇಲೇದೇವರಹಳ್ಳಿ, ಗಂಗನಘಟ್ಟ, ಹುಣಸೇಘಟ್ಟ. |
| 3. | ಗುಬ್ಬಿ ತಾಲ್ಲೂಕು, ನಿಟ್ಟೂರಿನಲ್ಲಿ (ಸರ್ವೆ ನಂ.58/ ಪಿ6) ಸ್ಥಾಪಿಸಲು ಉದ್ದೇಶಿಸಿರುವ 220/ 110/ 11 ಕೆ.ವಿ. ಉಪಸ್ಥಾವರಕ್ಕೆ ಹಾಲಿ ಇರುವ 220 ಕೆ.ವಿ. ಬಿ3- ಬಿ4 ಮಾರ್ಗದಿಂದ 220 ಕೆ.ವಿ. ಲಿಲೋ ಮಾರ್ಗವನ್ನು ನಿರ್ಮಿಸುವುದು ಹಾಗೂ ನಿಟ್ಟೂರಿನಲ್ಲಿ 2x100 ಎಂ.ವಿ.ಎ. 220/110/ 11 ಕೆ.ವಿ. ಉಪಸ್ಥಾವರ ನಿರ್ಮಿಸುವುದು. | 1. ನಿಟ್ಟೂರಿನಲ್ಲಿ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿನ ನಷ್ಟವನ್ನು ಕಡಿಮೆಗೊಳಿಸುವುದು.<br>3. ಕೆ.ಬಿ.ಕ್ರಾಸ್ ಉಪಸ್ಥಾವರದ ಮೇಲಿರುವ ಅಧಿಕ ಒತ್ತಡವನ್ನು ಕಡಿಮೆ ಮಾಡುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 1673.39 | ನಿಟ್ಟೂರು |
| 4. | ಸಂಪಿಗೆ-ತುರುವೇಕೆರೆ ಗ್ರಾಮದ ಸರ್ವೆ ನಂ.170 ಮತ್ತು 56ರಲ್ಲಿ 110/ 11 ಕೆ.ವಿ. ವಿದ್ಯುತ್ ಉಪಸ್ಥಾವರ ನಿರ್ಮಾಣ ಮತ್ತು ಅದಕ್ಕೆ 11.56 ಕಿ.ಮೀ. ಉದ್ದದ 110 ಕೆ.ವಿ. ಒಂಟಿ ಮಾರ್ಗವನ್ನು ನಿಟ್ಟೂರು-ದೊಡ್ಡಗುಣಿ ಮಾರ್ಗದಿಂದ ನಿರ್ಮಿಸುವುದು. | 1. ಸಂಪಿಗೆ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿನ ನಷ್ಟವನ್ನು ಕಡಿಮೆಗೊಳಿಸುವುದು.<br>3. ತುರುವೇಕೆರೆ ಉಪಸ್ಥಾವರದ ಮೇಲಿರುವ ಅಧಿಕ ಒತ್ತಡವನ್ನು ಕಡಿಮೆ ಮಾಡುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 471.90 | ದೊಡ್ಡಗುಣಿ, ದೇವ್ರಹಟ್ಟಿ, ನೇರಳಕೆರೆ, ಅಮ್ಮಸಂದ್ರ, ವೆಲ್ಲಬಾಗಿ, ಗುಂಡಿ ಕಾವಲ್, ಬ್ಯಾಡವಳ್ಳಿ ಕಾವಲ್. |
| 5. | ಕೊರಟಗೆರೆ ತಾಲ್ಲೂಕು ಊರ್ಡಿಗೆರೆ ಗ್ರಾಮದ ಸರ್ವೆ ನಂ.15/ 2, 15/6, 15/7, 15/9ರಲ್ಲಿ 2x8 ಎಂವಿಎ 66/11 ಕೆ.ವಿ. ವಿದ್ಯುತ್ ಉಪಸ್ಥಾವರವನ್ನು ಸ್ಥಾಪಿಸುವುದು ಮತ್ತು ಅದಕ್ಕಾಗಿ ಹಾಲಿ ಇರುವ ಹಿರೇಹಳ್ಳಿ- ಕೋಳಾಲ 66 ಕೆ.ವಿ. ಮಾರ್ಗದಿಂದ 2.5 ಕಿ.ಮೀ. ಉದ್ದದ 66 ಕೆ.ವಿ. ಲಿಲೋ ಮಾರ್ಗವನ್ನು ನಿರ್ಮಿಸುವುದು. | 1. ಊರ್ಡಿಗೆರೆ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿನ ನಷ್ಟವನ್ನು ಕಡಿಮೆಗೊಳಿಸುವುದು.<br>3. ಕೊಳಾಲ ಉಪಸ್ಥಾವರದ ಮೇಲಿರುವ ಅಧಿಕ ಒತ್ತಡವನ್ನು ಕಡಿಮೆ ಮಾಡುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 323.29 | ಸಿದ್ದಲಿಂಗಯ್ಯನಪಾಳ್ಯ, ಕೊಡಿಗೇನಹಳ್ಳಿ/ ಕೆಂಪನಹಳ್ಳಿ, ಊರ್ಡಿಗೆರೆ |

| ಕ್ರ. ಸಂ. | ಯೋಜನೆಯ ಹೆಸರು | ಯೋಜನೆಯ ಪ್ರಮುಖ ಲಕ್ಷಣಗಳು | ಯೋಜನೆಯ ಅಂದಾಜು ವೆಚ್ಚ (ಲಕ್ಷ ರೂಗಳಲ್ಲಿ) | ಹಾದುಹೋಗುವ ಪ್ರದೇಶ |
|---|---|---|---|---|
| 6. | ಗುಬ್ಬಿ ತಾಲ್ಲೂಕು, ಕಡಬಾ ಗ್ರಾಮದ ಸನಂ.183ರಲ್ಲಿ 2x10 ಎಂವಿಎ 110/11 ಕೆ.ವಿ. ವಿದ್ಯುತ್ ಉಪಸ್ಥಾವರವನ್ನು ನಿರ್ಮಿಸುವುದು ಮತ್ತು ಅದಕ್ಕಾಗಿ 1.18 ಕಿ.ಮೀ. ಉದ್ದದ 110 ಕೆ.ವಿ. ಲಿಲೋ ಮಾರ್ಗವನ್ನು ನಿಟ್ಟೂರು-ಕಲ್ಲೂರು ಮಾರ್ಗದಿಂದ ನಿರ್ಮಿಸುವುದು. | 1. ಕಡಬ ಮತ್ತು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ವಿದ್ಯುತ್ ವೋಲ್ಟೇಜ್ ಉತ್ತಮಪಡಿಸುವುದು.<br>2. ಮಾರ್ಗವ್ಯವಸ್ಥೆಯಲ್ಲಿನ ನಷ್ಟವನ್ನು ಕಡಿಮೆಗೊಳಿಸುವುದು.<br>3. ಕಲ್ಲೂರು ಉಪಸ್ಥಾವರದ ಮೇಲಿರುವ ಅಧಿಕ ಒತ್ತಡವನ್ನು ಕಡಿಮೆ ಮಾಡುವುದು.<br>4. ವಿದ್ಯುತ್ ಸರಬರಾಜಿನ ಗುಣಮಟ್ಟ ಉತ್ತಮ ಪಡಿಸುವುದು ಮತ್ತು ಸ್ಥಿರತೆ ಕಾಪಾಡುವುದು.<br>5. ಮುಂಬರುವ ಗ್ರಾಹಕರ ಬೇಡಿಕೆಗಳಿಗನುಸಾರವಾಗಿ ಸರಬರಾಜಿನ ಅವಕಾಶ ಕಲ್ಪಿಸುವುದು. | 354.63 | ಹೊಸಪಾಳ್ಯ, ಕಡಬ |

ಕ.ವಿ.ಪ್ರ.ನಿ.ನಿ. ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ-III ರ (ಕೇಂದ್ರ ಕಾಯ್ದೆ 1886ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ. ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಪರಿಗಣನೆಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 60 ದಿನಗಳ ಒಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಕೋತಿತೋಪು, ತುಮಕೂರು-02 ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ)

ಪಿ.ಡಿ.76 ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ತುಮಕೂರು.

## ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು

## ಕುಲಸಚಿವರವರ ಆಡಳಿತ ಕಛೇರಿ, ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಬೆಂಗಳೂರು-560 065

## ಅಧಿಸೂಚನೆ

### ಸಂಖ್ಯೆ:ಆಕ: ಸಾವಿ-2: ಮಾಹಿತಿ ಹಕ್ಕು ಕಾಯ್ದೆ: 2005-06, ದಿನಾಂಕ:3ನೇ ಮಾರ್ಚ್, 2006

**ವಿಷಯ:** 2005ರ ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಕಾಯ್ದೆಯ ಅನುಷ್ಠಾನ ಕುರಿತು.

**ಉಲ್ಲೇಖ:** 1. ಕುಲಸಚಿವರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಆಕ: ಸಾವಿ-2: ಮಾಹಿತಿ ಹಕ್ಕು ಕಾಯ್ದೆ: 2005-06 ದಿನಾಂಕ: 08.09.2005.

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕಾಯ್ದೆ ಸಂ.22) ಸೆಕ್ಷನ್ 5(1) ಮತ್ತು 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷಿ ವಿಶ್ವವಿದ್ಯಾನಿಲಯ ಬೆಂಗಳೂರಿಗೆ ಸಂಬಂಧಿಸಿದಂತೆ, ದಿನಾಂಕ: 08.09.2005ರಂದು (ಉಲ್ಲೇಖ: 1) ನೇಮಕಮಾಡಿದ್ದ ಪ್ರಾಧಿಕಾರಗಳ ಜೊತೆಗೆ ಈ ಕೆಳಕಂಡ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

| | | |
|---|---|---|
| 1. | ಕುಲಸಚಿವರು,<br>ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಶೈಕ್ಷಣಿಕ ಆಡಳಿತಾತ್ಮಕ ವಿಷಯಗಳು) |
| | ಉಪ ಕುಲಸಚಿವರು/ ಸಹಾಯಕ ಕುಲಸಚಿವರು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಶೈಕ್ಷಣಿಕ ಆಡಳಿತಾತ್ಮಕ ವಿಷಯಗಳು) |
| 2. | ಆಡಳಿತಾಧಿಕಾರಿಗಳು,<br>ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಸೇವಾ ಮತ್ತು ನೇಮಕಾತಿ ವಿಷಯಗಳು) |
| | ಉಪ ಆಡಳಿತಾಧಿಕಾರಿಗಳು/ ಸಹಾಯಕ ಆಡಳಿತಾಧಿಕಾರಿಗಳು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಸೇವಾ ಮತ್ತು ನೇಮಕಾತಿ ವಿಷಯಗಳು) |
| 3. | ಹಣಕಾಸು ನಿಯಂತ್ರಣಾಧಿಕಾರಿಗಳು,<br>ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಹಣಕಾಸು ವಿಷಯಗಳು) |
| | ಉಪ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಹಣಕಾಸು ವಿಷಯಗಳು) |
| 4. | ಸಂಶೋಧನಾ ನಿರ್ದೇಶಕರು,<br>ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಸಂಶೋಧನೆ ಮತ್ತು ಸಂಶೋಧನಾ ಕೇಂದ್ರಗಳ ವಿಷಯಗಳು) |
| | ಸಹ ಸಂಶೋಧನಾ ನಿರ್ದೇಶಕರು/ ಹಿರಿಯ ಕ್ಷೇತ್ರಾಧೀಕ್ಷಕರು, ವಲಯ ಸಂಶೋಧನಾ ಕೇಂದ್ರಗಳು/ ಕ್ಷೇತ್ರಾಧೀಕ್ಷಕರು, ಕೃಷಿ ಸಂಶೋಧನಾ ಕೇಂದ್ರ, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಸಂಶೋಧನೆ ಮತ್ತು ಸಂಶೋಧನಾ ಕೇಂದ್ರಗಳ ವಿಷಯಗಳು) |

| | | |
|---|---|---|
| 5. | ವಿಸ್ತರಣಾ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಹೆಬ್ಬಾಳ, ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ತರಬೇತಿ ಮತ್ತು ವಿಸ್ತರಣೆಗೆ ಸಂಬಂಧಿಸಿದ ಆಡಳಿತಾತ್ಮಕ ವಿಷಯಗಳು) |
| | ವಿಸ್ತರಣಾ ಸಂಯೋಜಕರು, ವಿಸ್ತರಣಾ ಮುಂದಾಳುಗಳು/ ತರಬೇತಿ ಸಂಘಟಕರು/ ಮುಖ್ಯ ಬೋಧಕ, (ರೈತ ತರಬೇತಿ ಕೇಂದ್ರ), ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ತರಬೇತಿ ಮತ್ತು ವಿಸ್ತರಣೆಗೆ ಸಂಬಂಧಿಸಿದ ಆಡಳಿತಾತ್ಮಕ ವಿಷಯಗಳು) |
| 6. | ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ವಿದ್ಯಾರ್ಥಿ ಕಲ್ಯಾಣ/ ಕ್ರೀಡೆ/ ಸಾಂಸ್ಕೃತಿಕ ಕಾರ್ಯಕ್ರಮಗಳ ವಿಷಯಗಳು) |
| | ಉಪ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ವಿದ್ಯಾರ್ಥಿ ಕಲ್ಯಾಣ/ ಕ್ರೀಡೆ/ ಸಾಂಸ್ಕೃತಿಕ ಕಾರ್ಯಕ್ರಮಗಳ ವಿಷಯಗಳು) |
| 7. | ಆಸ್ತಿ ಅಧಿಕಾರಿಗಳು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಭೂಮಿ, ಕಟ್ಟಡಗಳು, ನಾಗರೀಕ ಕಾಮಗಾರಿಗಳು ದರಖಾಸ್ತು (ಟೆಂಡರು) ಮತ್ತು ಆಸ್ತಿ ನಿರ್ವಹಣೆಗೆ ಸಂಬಂಧಿಸಿದ ವಿಷಯಗಳು) |
| | ಕಾರ್ಯನಿರ್ವಾಹಕ ಅಭಿಯಂತರರು/ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಭೂಮಿ, ಕಟ್ಟಡಗಳು, ನಾಗರೀಕ ಕಾಮಗಾರಿಗಳು ದರಖಾಸ್ತು (ಟೆಂಡರು) ಮತ್ತು ಆಸ್ತಿ ನಿರ್ವಹಣೆಗೆ ಸಂಬಂಧಿಸಿದ ವಿಷಯಗಳು) |
| 8. | ಶಿಕ್ಷಣ ನಿರ್ದೇಶಕರು (ಸ್ನಾತಕೋತ್ತರ) ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಸ್ನಾತಕೋತ್ತರ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳು) |
| | ಸಹಾಯಕ ಕುಲಸಚಿವರು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಸ್ನಾತಕೋತ್ತರ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳು) |
| 9. | ಶಿಕ್ಷಣ ನಿರ್ದೇಶಕರು (ಕೃಷಿ) ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತಾಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು, ಕೃಷಿ ಮಹಾವಿದ್ಯಾಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ ಮತ್ತು ಆಡಳಿತಾತ್ಮಕ ವಿಷಯಗಳು) |
| 10. | ಶಿಕ್ಷಣ ನಿರ್ದೇಶಕರು (ಕೃಷಿ) ಕೃಷಿ ಮಹಾ ವಿದ್ಯಾಲಯ, ವಿ.ಸಿ. ಫಾರಂ, ಮಂಡ್ಯ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತ ಅಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ಕೃಷಿ ಮಹಾವಿದ್ಯಾಲಯ, ವಿ.ಸಿ. ಫಾರಂ., ಮಂಡ್ಯ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| 11. | ಶಿಕ್ಷಣ ನಿರ್ದೇಶಕರು (ಕೃಷಿ) ಕೃಷಿ ಮಹಾವಿದ್ಯಾಲಯ, ನವಿಲೆ, ಶಿವಮೊಗ್ಗ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತ ಅಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ಕೃಷಿ ಮಹಾವಿದ್ಯಾಲಯ, ನವಿಲೆ, ಶಿವಮೊಗ್ಗ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಕಾಲೇಜು ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| 12. | ಶಿಕ್ಷಣ ನಿರ್ದೇಶಕರು (ತೋಟಗಾರಿಕೆ) ತೋಟಗಾರಿಕೆ ಮಹಾವಿದ್ಯಾಲಯ, ಮೂಡಿಗೆರೆ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತಾಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ತೋಟಗಾರಿಕೆ ಮಹಾವಿದ್ಯಾಲಯ, ಮೂಡಿಗೆರೆ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| 13. | ಶಿಕ್ಷಣ ನಿರ್ದೇಶಕರು (ರೇಷ್ಮೆ) ರೇಷ್ಮೆ ಕೃಷಿ ಮಹಾವಿದ್ಯಾಲಯ, ಚಿಂತಾಮಣಿ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತಾಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ರೇಷ್ಮೆ ಕೃಷಿ ಮಹಾವಿದ್ಯಾಲಯ, ಚಿಂತಾಮಣಿ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |

| | | |
|---|---|---|
| 14. | ಶಿಕ್ಷಣ ನಿರ್ದೇಶಕರು (ಅರಣ್ಯ) ಅರಣ್ಯ ಮಹಾವಿದ್ಯಾಲಯ, ಪೊನ್ನಂಪೇಟೆ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತಾಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ಅರಣ್ಯ ಮಹಾವಿದ್ಯಾಲಯ, ಪೊನ್ನಂಪೇಟೆ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| 15. | ಶಿಕ್ಷಣ ನಿರ್ದೇಶಕರು (ಕೃಷಿ) ಕೃಷಿ ಮಹಾವಿದ್ಯಾಲಯ, ಹಾಸನ. | ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| | ಸಹಾಯಕ ಆಡಳಿತಾಧಿಕಾರಿಗಳು/ ಸಹಾಯಕ ಕುಲಸಚಿವರು/ ಸಹಾಯಕ ಹಣಕಾಸು ನಿಯಂತ್ರಣಾಧಿಕಾರಿಗಳು/ ಸಹಾಯಕ ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು/ ಸಹಾಯಕ ಗ್ರಂಥ ಪಾಲಕರು/ ಕೃಷಿ ಮಹಾವಿದ್ಯಾಲಯ, ಹಾಸನ. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಮಹಾ ವಿದ್ಯಾಲಯ ಮತ್ತು ಆವರಣ, ಶೈಕ್ಷಣಿಕ/ ಆಡಳಿತಾತ್ಮಕ ವಿಷಯಗಳು) |
| 16. | ಗ್ರಂಥ ಪಾಲಕರು, ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಾರ್ವಜನಿಕ ಮಾಹಿತಿ ಅಧಿಕಾರಿ (ಗ್ರಂಥಾಲಯಕ್ಕೆ ಸಂಬಂಧಿಸಿದ ಆಡಳಿತಾತ್ಮಕ ವಿಷಯಗಳು) |
| | ಉಪ ಗ್ರಂಥಪಾಲಕರು/ ಸಹಾಯಕ ಗ್ರಂಥ ಪಾಲಕರು ಕೃಷಿ ವಿಶ್ವವಿದ್ಯಾನಿಲಯ, ಗಾ.ಕೃ.ವಿ.ಕೇ., ಬೆಂಗಳೂರು. | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಗ್ರಂಥಾಲಯಕ್ಕೆ ಸಂಬಂಧಿಸಿದ ಆಡಳಿತಾತ್ಮಕ ವಿಷಯಗಳು) |
| 17. | ಕುಲಪತಿಗಳು, ಕೃಷಿ ವಿಶ್ವವಿದ್ಯಾನಿಲಯ, ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಬೆಂಗಳೂರು. | ಮೇಲ್ಮನವಿ ಪ್ರಾಧಿಕಾರ. |

ಕುಲಸಚಿವರು.

**ಅನುಬಂಧ**

**ಮಾಹಿತಿ ಹಕ್ಕು ಕಾಯ್ದೆ**

**ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಿಂದ ಮಾಹಿತಿ ಪಡೆಯಲು ಅರ್ಜಿ ನಮೂನೆ**

1. ಅರ್ಜಿದಾರನ ಪೂರ್ಣ ಹೆಸರು :
2. ವಿಳಾಸ :
3. ದೂರವಾಣಿ ಸಂಖ್ಯೆ/ ಮೊಬೈಲ್ ಸಂಖ್ಯೆ/ ಫ್ಯಾಕ್ಸ್ ಸಂಖ್ಯೆ/ ಇ- ಮೈಲ್ ಐಡಿ: :
4. ಕೋರಿರುವ ಮಾಹಿತಿ (ಸ್ಪಷ್ಟವಾಗಿ ಸೂಚಿಸುವುದು) :
5. ಯಾವ ಉದ್ದೇಶಗಳಿಗಾಗಿ ಮಾಹಿತಿಯ ಅವಶ್ಯಕತೆ ಇದೆ. :
6. ಮಾಹಿತಿ ಪಡೆಯಲು ಪಾವತಿಸಿರುವ ಶುಲ್ಕದ ವಿವರ :

| ಮಾಹಿತಿ ಪಡೆಯಲು ನಿಗದಿ ಪಡಿಸಿರುವ ಶುಲ್ಕ | ಸಾಫ್ಟ್ ಕಾಪಿ (ಸಿ.ಡಿ.) | ಹಾರ್ಡ್ ಕಾಪಿ ಪ್ರತಿ ಪುಟಕ್ಕೆ | ಇ. ಮೈಲ್. |
|---|---|---|---|
| ರೂ. 100/- | ರೂ. 100/- | ರೂ.1.50/- | ಉಚಿತ* |

*ವಿದ್ಯುನ್ಮಾನ ರೂಪದಲ್ಲಿ ದೊರೆಯುವ ಮಾಹಿತಿಯನ್ನು ಮಾತ್ರ ಒದಗಿಸಲಾಗುವುದು.

7. ಯಾವ ರೂಪದಲ್ಲಿ ಮಾಹಿತಿಯನ್ನು ಪಡೆಯಲಿಚ್ಛಿಸುವಿರಿ : ಸಾಫ್ಟ್ ಕಾಪಿ (ಸಿ.ಡಿ.)/ ಹಾರ್ಡ್ ಕಾಪಿ/ ಇ. ಮೈಲ್.
8. ಪಾವತಿಸಿದ ಶುಲ್ಕದ ವಿವರ ರೂ.................. : ಡಿ.ಡಿ. ಸಂಖ್ಯೆ: ದಿನಾಂಕ:

(ಸೂಚನೆ: ಡಿಮ್ಯಾಂಡ್ ಡ್ರಾಫ್ಟ್‌ನ್ನು ಹಣಕಾಸು ನಿಯಂತ್ರಣಾಧಿಕಾರಿಗಳು, ಕೃಷಿ ವಿಶ್ವವಿದ್ಯಾನಿಲಯ, ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಬೆಂಗಳೂರು ಇವರ ಹೆಸರಿನಲ್ಲಿ ಪಡೆಯುವುದು.) (The D.D. should be in favour of the Comptroller, UAS, GKVK, Bangalore.)

ಅರ್ಜಿದಾರನ ಸಹಿ.

**ಕೃಷಿ ವಿಶ್ವವಿದ್ಯಾನಿಲಯ**

**ಆಡಳಿತ ಕಛೇರಿ, ಗಾಂಧಿ ಕೃಷಿ ವಿಜ್ಞಾನ ಕೇಂದ್ರ, ಬೆಂಗಳೂರು-560 065**

**ಅಧಿಸೂಚನೆ**

**ಸಂಖ್ಯೆ: ಆಕ: ಸಾವಿ-2: ಮಾಹಿತಿ ಹಕ್ಕು ಕಾಯ್ದೆ: 05-06, ದಿನಾಂಕ:8ನೇ ಸೆಪ್ಟೆಂಬರ್, 2005**

**ವಿಷಯ:** 2005ರ ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಕಾಯ್ದೆಯ ಅನುಷ್ಠಾನ ಕುರಿತು.

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕೇಂದ್ರ ಕಾಯ್ದೆ ಸಂಖ್ಯೆ: 22) ಸೆಕ್ಷನ್ 5(1) ಮತ್ತು 5(2) ಗಳೆರಡರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರಿಗೆ ಸಂಬಂಧಿಸಿದಂತೆ ಈ ಕೆಳಕಂಡ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

| | | |
|---|---|---|
| 1. | ಕುಲಸಚಿವರು: ಆಡಳಿತಾಧಿಕಾರಿಗಳು, ಕೃಷಿ ವಿಶ್ವವಿದ್ಯಾನಿಲಯ, ಜಿಕೆವಿಕೆ, ಬೆಂಗಳೂರು-560065. | : ಸಾರ್ವಜನಿಕ ಮಾಹಿತಿ ಅಧಿಕಾರಿ. |
| 2. | ಶಿಕ್ಷಣ ನಿರ್ದೇಶಕರು (ಸ್ನಾತಕೋತ್ತರ), ಕೃವಿವಿ, ಬೆಂಗಳೂರು, ಎಲ್ಲಾ ಶಿಕ್ಷಣ ನಿರ್ದೇಶಕರುಗಳು, ಕೃವಿವಿ, ಬೆಂಗಳೂರು, ವಿಸ್ತರಣಾ ನಿರ್ದೇಶಕರು, ಸಂಶೋಧನಾ ನಿರ್ದೇಶಕರು, ವಿದ್ಯಾರ್ಥಿ ಕಲ್ಯಾಣ ನಿರ್ದೇಶಕರು, ಹಣಕಾಸು ನಿಯಂತ್ರಕರು, ಆಸ್ತಿ ಅಧಿಕಾರಿಗಳು ಮತ್ತು ಗ್ರಂಥಪಾಲಕರು, ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು. | : ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ. |
| 3. | ಕುಲಪತಿಗಳು, ಕೃಷಿ ವಿಶ್ವವಿದ್ಯಾನಿಲಯ, ಜಿಕೆವಿಕೆ, ಬೆಂಗಳೂರು-560 065. | : ಮೇಲ್ಮನವಿ ಪ್ರಾಧಿಕಾರ. |

ಪಿ.ಡಿ.77 ಕುಲಸಚಿವರು.

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು ರವರ ನ್ಯಾಯಾಲಯ

**ಉಪಸ್ಥಿತರು:** ಹೊನ್ನಪ್ಪ,
ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು.

**ಫಿರ್ಯಾದಿ:** ಅಬಕಾರಿ ಉಪ ನಿರೀಕ್ಷಕರು (ಜಾರಿ ಮತ್ತು ತನಿಖೆ),
ಗುಂಡ್ಲುಪೇಟೆ ತಾಲ್ಲೂಕು.

**ವಿರುದ್ಧ**

**ಆರೋಪಿ:** ವೀರಭದ್ರಯ್ಯ ಬಿನ್ ಶೆಟ್ಟಯ್ಯ.

ಆರೋಪವನ್ನು ಕ.ಅ.ಕಾಯ್ದೆ 1965ರ ಕಲಂ 32(1)ರಂತೆ ಹೊರಿಸಿ, ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಕಲಂ 43(ಎ)(1) ರನ್ವಯ ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

ದಿನಾಂಕ: 11.04.2006 ರಂದು ಬೆಳಗ್ಗೆ 9.45 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, (ಜಾರಿ ಮತ್ತು ತನಿಖೆ), ಗುಂಡ್ಲುಪೇಟೆ ತಾಲ್ಲೂಕು ಇವರು ಗುಂಡ್ಲುಪೇಟೆ ತಾಲ್ಲೂಕು ಯರಿಯೂರು-ಬಾಚಳ್ಳಿ ಗ್ರಾಮಕ್ಕೆ ಹೋಗುವ ರಸ್ತೆಯ ಮಧ್ಯ ಭಾಗದಲ್ಲಿ ವಾಹನ ಟಿವಿಎಸ್-50 ಎಕ್ಸ್‌ಎಲ್ ಸಂಖ್ಯೆ: ಸಿಎನ್ಎಂ-7050 ರಲ್ಲಿ ಅಕ್ರಮವಾಗಿ 70 ಲೀ. ಸೇಂದಿಯನ್ನು 3 ಬಿಳಿಯ ಬಣ್ಣದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದಕ್ಕಾಗಿ, ವಾಹನ ಸೇಂದಿಯನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂ: 10/05-06 ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ದಾಖಲಾತಿಗಳನ್ನು ನೋಡಲಾಗಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32ರ ಉಲ್ಲಂಘನೆ ಮೇಲ್ನೋಟಕ್ಕೆ ಕಂಡುಬಂದ ಕಾರಣ ಪ್ರತಿವಾದಿಗೆ ದಿನಾಂಕ: 22.05.2006ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ವೀರಭದ್ರಯ್ಯ ಬಿನ್ ಶೆಟ್ಟಯ್ಯ ಇವರಿಗೆ ನೋಂದಣಿ ಅಂಚೆಯ ಮೂಲಕ ಕಳುಹಿಸಲಾಗಿರುತ್ತದೆ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ: 11.04.2006ರಂದು ವಾಹನ ಟಿವಿಎಸ್-50-ಎಕ್ಸ್‌ಎಲ್ ಸಂಖ್ಯೆ: ಸಿಎನ್ಎಂ-7050 ರಲ್ಲಿ ಅಕ್ರಮವಾಗಿ 70 ಲೀ. ಸೇಂದಿಯನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ವೀರಭದ್ರಯ್ಯ ಬಿನ್ ಶೆಟ್ಟಯ್ಯ ಇವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಅಬಕಾರಿ ಕಾಯ್ದೆ ಕಲಂ 42ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ) (1)(2) ರಡಿಯಲ್ಲಿ ಆರೋಪಿಯ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು ಒಂದು ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಅಲ್ಲದೆ ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿ.ಟಿ.ಸಿ.ಆರ್. 218/ 05-06, ದಿನಾಂಕ: 31ನೇ ಮೇ, 2005**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಟಿವಿಎಸ್-50 ಎಕ್ಸ್‌ಎಲ್ ಸಂಖ್ಯೆ: ಸಿಎನ್ಎಂ-7050 ಮತ್ತು 70 ಲೀ. ಸೇಂದಿಯನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಆದೇಶ ನೀಡಲಾಗುವುದು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2006ನೇ ಇಸವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**
ಅಬಕಾರಿ ಅಧೀಕ್ಷಕರು ಹಾಗೂ
ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

ಪಿ.ಆರ್.962

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು ರವರ ನ್ಯಾಯಾಲಯ

**ಉಪಸ್ಥಿತರು:** ಹೊನ್ನಪ್ಪ,

ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು.

**ಫಿರ್ಯಾದಿ:** ಆರಕ್ಷಕ ಉಪ ನಿರೀಕ್ಷಕರು,

ಬೀಚನಹಳ್ಳಿ ಪೊಲೀಸ್ ಠಾಣೆ, ಹೆಚ್.ಡಿ. ಕೋಟೆ ತಾಲ್ಲೂಕು.

**ವಿರುದ್ಧ**

**ಆರೋಪಿ:** ರಂಗಸ್ವಾಮಿ ಬಿನ್ ರಾಜಪ್ಪ.

ಆರೋಪವನ್ನು ಕ.ಅ.ಕಾಯ್ದೆ 1965ರ ಕಲಂ 32(1)ರಂತೆ ಹೊರಿಸಿ, ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಕಲಂ 43(ಎ)(1) ರನ್ವಯ ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

ದಿನಾಂಕ:14.12.2005 ರಂದು ಹಗಲು 7.00 ರಿಂದ 8.00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಬೀಚನಹಳ್ಳಿ ಪೊಲೀಸ್ ಠಾಣೆ, ಹೆಚ್.ಡಿ. ಕೋಟೆ ತಾಲ್ಲೂಕು ಇವರು ಬೀಚನಹಳ್ಳಿ ಠಾಣೆಯ ಮುಂಭಾಗದಲ್ಲಿರುವ ಗುರುಸ್ವಾಮಿ ಸರ್ಕಲ್ ಬಳಿ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಬಿ-4000 ರಲ್ಲಿ ಅಕ್ರಮವಾಗಿ 22 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 180 ಮಿಲಿಯ 48 ಬಾಟಲ್‌ನಂತೆ ಒಟ್ಟು 1056 ಬಾಟಲ್‌ಗಳಲ್ಲಿ 190.080 ಲೀ. ಸೂಪರ್ ಜಾಕ್ ವಿಸ್ಕಿ ಎಂಬ ಮದ್ಯದ ಬಾಟಲ್‌ಗಳನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದಕ್ಕಾಗಿ, ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ: 110/ 2005ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಆರಕ್ಷಕ ವೃತ್ತ ನಿರೀಕ್ಷಕರು, ಹೆಚ್.ಡಿ. ಕೋಟೆ ತಾಲ್ಲೂಕು ಇವರು 14.04.2006ರಂದು ವರದಿಯನ್ನು ಸಲ್ಲಿಸಿ, ವಾಹನ ಮತ್ತು ಮದ್ಯ ದಾಸ್ತಾನನ್ನು ಅಬಕಾರಿ ಉಪ ನಿರೀಕ್ಷಕರು, ಹೆಚ್.ಡಿ. ಕೋಟೆ ತಾಲ್ಲೂಕು ಇವರಿಗೆ ಹಸ್ತಾಂತರಿಸಲು ಅನುಮತಿಗಾಗಿ ಕೋರಿರುತ್ತಾರೆ. ಅದರಂತೆ ವಾಹನ ಮತ್ತು ಮದ್ಯವನ್ನು ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ದಿನಾಂಕ: 15.04.2005ರಂದು ಆದೇಶ ನೀಡಲಾಗಿದೆ.

ಪ್ರಕರಣದ ದಾಖಲಾತಿಗಳನ್ನು ನೋಡಲಾಗಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32ರ ಉಲ್ಲಂಘನೆ ಮೇಲ್ನೋಟಕ್ಕೆ ಕಂಡುಬಂದ ಕಾರಣ ಪ್ರತಿವಾದಿಗೆ ದಿನಾಂಕ: 22.05.2006ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ರಂಗಸ್ವಾಮಿ ಬಿನ್ ರಾಜಪ್ಪ ಇವರಿಗೆ ನೋಂದಣಿ ಅಂಚೆಯ ಮೂಲಕ ಕಳುಹಿಸಲಾಗಿದ್ದು, ಈ ವಿಳಾಸದಾರರು ಗ್ರಾಮ ಬಿಟ್ಟು ಬೇರೆ ಕಡೆಗೆ ಹೋಗಿರುತ್ತಾರೆ. ಅವರ ಸರಿಯಾದ ವಿಳಾಸ ಗೊತ್ತಿಲ್ಲವೆಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ:14.12.2005ರಂದು ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಬಿ-4000ರಲ್ಲಿ ಅಕ್ರಮವಾಗಿ 190.080 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ರಂಗಸ್ವಾಮಿ ಬಿನ್ ರಾಜಪ್ಪ ಇವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಗೆ ಕಲಂ 43(ಬಿ)ರ ಅಡಿಯಲ್ಲಿ ನೋಟೀಸನ್ನು ಜಾರಿಗೊಳಿಸಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ. ಅಬಕಾರಿ ಕಾಯ್ದೆ ಕಲಂ 42ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ) (1)(2) ರಡಿಯಲ್ಲಿ ಆರೋಪಿಯ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು ಐದು ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಅಲ್ಲದೆ ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿ.ಟಿ.ಸಿ.ಆರ್. 216/ 05-06, ದಿನಾಂಕ: 31ನೇ ಮೇ, 2005**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಅಂಬಾಸಿಡರ್ ಕಾರ್ ಸಂಖ್ಯೆ: ಸಿಎಬಿ-4000 ಮತ್ತು 190.080 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಆದೇಶ ನೀಡಲಾಗುವುದು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2006ನೇ ಇಸವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**

ಅಬಕಾರಿ ಅಧೀಕ್ಷಕರು ಹಾಗೂ

ಅಧಿಕೃತ ಅಧಿಕಾರಿಗಳು, ಇ.ಐ.ಬಿ.,

ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

ಪಿ.ಆರ್.963

## ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು ರವರ ನ್ಯಾಯಾಲಯ

**ಉಪಸ್ಥಿತರು:** ಹೊನ್ನಪ್ಪ,
ಅಬಕಾರಿ ಅಧೀಕ್ಷಕರು ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆ, ಮೈಸೂರು.

**ಫಿರ್ಯಾದಿ:** ಅಬಕಾರಿ ನಿರೀಕ್ಷಕರು,
ಉಪವಿಭಾಗ, ಮೈಸೂರು.

**ವಿರುದ್ಧ**

**ಆರೋಪಿ:** ಸಯ್ಯದ್ ಶಫಿ ಮತ್ತು ಇತರರು.

ಆರೋಪವನ್ನು ಕ.ಅ.ಕಾಯ್ದೆ 1965ರ ಕಲಂ 32(1)ರಂತೆ ಹೊರಿಸಿ, ಜಪ್ತಿಯಾದ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಕಲಂ 43(ಎ)(1) ರನ್ವಯ ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

ದಿನಾಂಕ:20.12.2004 ರಂದು ಬೆಳಗ್ಗೆ 11.30 ಗಂಟೆ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಉಪ ವಿಭಾಗ, ಮೈಸೂರು ಇವರು ಟಿ. ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ಬಸವನಹಳ್ಳಿ ಗ್ರಾಮದ ಬಸವೇಶ್ವರ ಬಿನ್ನಿ ಮಾಡ್ರನ್ ರೈಸ್‌ಮಿಲ್ ಮುಂಭಾಗದಲ್ಲಿ ವಾಹನ ಲಾರಿ ಸಂಖ್ಯೆ: ಕೆಎ-23/ 2074ರಲ್ಲಿ 8000 ಲೀ. ತೆರಿಗೆ ಪಾವತಿಸಿರುವ ಸಾರಾಯಿಯ ಜೊತೆಯಲ್ಲಿ 1450 ಲೀ ತೆರಿಗೆರಹಿತ ಸಾರಾಯಿಯನ್ನು ಅಕ್ರಮವಾಗಿ (945 ಪ್ಲಾಸ್ಟಿಕ್ ಕ್ರೇಟ್‌ನಲ್ಲಿ ತಲಾ 100 ಮಿಲಿಯಂತೆ ಒಟ್ಟು 94,500 ಸಾರಾಯಿ ಸ್ಯಾಚೆಟ್‌ಗಳಲ್ಲಿ 9,450 ಲೀ.) ಹೊಂದಿ ಸಾಗಾಣಿಕೆ ಮಾಡುತ್ತಿದ್ದುದಕ್ಕಾಗಿ, ವಾಹನ ಮತ್ತು ಸಾರಾಯಿಯನ್ನು ವಶಪಡಿಸಿಕೊಂಡು, ಪ್ರ.ಮಾ.ವ. ಸಂಖ್ಯೆ: 11/ 04-05ರಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ಮಾಲೀಕತ್ವದ ವಿವರ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕೋಡಿ, ಬೆಳಗಾವಿ ಜಿಲ್ಲೆ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 24.12.2004ರಂದು ಪತ್ರ ಬರೆಯಲಾಗಿದ್ದು, ಈ ವರೆವಿಗೂ ಯಾವುದೇ ಮಾಹಿತಿ ಬಂದಿರುವುದಿಲ್ಲ. ಹಾಗೆಯೇ ವಾಹನದ ಮೌಲ್ಯವನ್ನು ನಿಗದಿಪಡಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಇವರಿಗೆ ಪತ್ರ ಬರೆಯಲಾಗಿದೆ.

ಪ್ರಕರಣದ ದಾಖಲಾತಿಗಳನ್ನು ನೋಡಲಾಗಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32ರ ಉಲ್ಲಂಘನೆ ಮೇಲ್ನೋಟಕ್ಕೆ ಕಂಡುಬಂದ ಕಾರಣ ಪ್ರತಿವಾದಿಗಳಿಗೆ ದಿನಾಂಕ: 25.04.2005ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ಸಯ್ಯದ್ ಶಫಿ, ವಿ. ಶ್ರೀಧರ್ ಮತ್ತು ಮೆ: ಚಾಮುಂಡಿ ಡಿಸ್ಟಿಲರಿ ಇವರಿಗೆ ಜಾರಿಗೊಳಿಸಲಾಗಿದ್ದು, ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ ರಹದಾರಿ ಸಂಖ್ಯೆ: EXE/ KPL/ TP/127/ 53/25/04-05 ನಂ. 533/ 04.12.2004ರಂತೆ ಸಾರಾಯಿ ಪ್ರಮಾಣ 6000 ಲೀಟರನ್ನು ಹೊಂದಿ ಸಾಗಾಣಿಕೆ ಮಾಡಲು ವಾಹನವು ದುರಸ್ತಿಯಲ್ಲಿದ್ದ ಕಾರಣ 1,450 ಲೀಟರ್ ಸಾರಾಯಿಯನ್ನು ಸಾರಾಯಿ ಘಟಕದಲ್ಲೇ ಅಂದರೆ ಮೆ: ಚಾಮುಂಡಿ ಡಿಸ್ಟಲರಿಯಲ್ಲೇ ಬಿಟ್ಟು ಬಂದಿರುವುದಾಗಿ ತನ್ನ ವಾಹನ ಚಾಲಕನು ತಿಳಿಸಿದ್ದು, ಆನಂತರ ದಿನಾಂಕ: 06.12.2004 ರಂದು ವಾಹನವನ್ನು ದುರಸ್ತಿಪಡಿಸಿ, ದಿನಾಂಕ 19.12.2004ರ ರಹದಾರಿ ಪತ್ರದನ್ವಯ ನಮೂದಿಸಿರುವ ಪ್ರಮಾಣದ ಜೊತೆಯಲ್ಲಿ 1,450 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡುವಾಗ ವಾಹನವನ್ನು ಮತ್ತು ಸಾರಾಯಿಯನ್ನು ಜಪ್ತು ಮಾಡಿರುತ್ತಾರೆ. ಆದರೆ ಇದರಲ್ಲಿ ತಾವು ಸರ್ಕಾರಕ್ಕೆ ಯಾವುದೇ ರೀತಿಯ ಮೋಸ ಅಥವಾ ಆದಾಯಕ್ಕೆ ಧಕ್ಕೆ ಬರುವಂತೆ ಮಾಡಿರುವುದಿಲ್ಲವೆಂದು ತಿಳಿಸುತ್ತಾ ಈ ತಪ್ಪನ್ನು ಮನ್ನಿಸಿ, ಪ್ರಕರಣವನ್ನು ಇಲಾಖಾ ಮುಖಾಂತರ ತೀರ್ಮಾನಿಸಿ ವಿಧಿಸುವ ದಂಡವನ್ನು ಸರ್ಕಾರಕ್ಕೆ ಸಂದಾಯ ಮಾಡಲು ಬದ್ಧರಾಗಿರುವುದಾಗಿ ಮತ್ತು ವಾಹನ ಮತ್ತು ಸಾರಾಯಿಯನ್ನು ಹಿಂತಿರುಗಿಸಬೇಕೆಂದು ಕೋರಿರುತ್ತಾರೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಪ್ಪಳ ಜಿಲ್ಲೆ ಇವರು ದಿನಾಂಕ: 03.12.2004ರಂದು ತನ್ನ ರಹದಾರಿ ಸಂಖ್ಯೆ: 531252 ರಂತೆ ಮೆ: ಚಾಮುಂಡಿ ಡಿಸ್ಟಿಲರೀಸ್, ಮಲಿಯೂರು ಗ್ರಾಮ, ಮೈಸೂರು ಜಿಲ್ಲೆಯಿಂದ ಕುಷ್ಟಗಿ ತಾಲ್ಲೂಕಿನ ಸಾರಾಯಿ ಗುತ್ತಿಗೆದಾರರಾದ ವಿ. ಶ್ರೀಧರ್‌ರವರಿಗೆ 6000 ಲೀ. ಪ್ರಮಾಣದ ಸಾರಾಯಿಯನ್ನು ಸ್ಯಾಚೆಟ್‌ಗಳಲ್ಲಿ ಹೊಂದಿ ಸಾಗಾಣಿಕೆ ಮಾಡಲು ರಹದಾರಿ ನೀಡಿರುತ್ತಾರೆ. ತದನಂತರ ಹಾಗೆಯೇ 14.12.2004ರಂದು ರಹದಾರಿ ಸಂಖ್ಯೆ: 531260 ರಂತೆ 8,000 ಲೀ. ಸಾರಾಯಿಯನ್ನು ಹೊಂದಿ ಸಾಗಾಣಿಕೆ ಮಾಡಲು ರಹದಾರಿ ನೀಡಿರುತ್ತಾರೆ. ಅದರಂತೆ ಅಬಕಾರಿ ಅಧೀಕ್ಷಕರು, ಮೆ: ಚಾಮುಂಡಿ ಡಿಸ್ಟಿಲರೀಸ್ ರವರು ಕ್ರಮವಾಗಿ 04.12.2004ರಂದು ಮತ್ತು 19.12.2004ರಂದು ರಹದಾರಿಯಲ್ಲಿ ನಮೂದಿಸಿರುವ 6000 ಲೀ. ಮತ್ತು 8000 ಲೀ.ಗಳನ್ನು ವಿತರಿಸಿರುವುದು ಕಂಡುಬಂದಿರುತ್ತದೆ.

ಈ ಪ್ರಕರಣದ ಎಲ್ಲಾ ಆಯಾಮಗಳನ್ನು ಪರಿಶೀಲಿಸಲಾಯಿತು. ವಿ. ಶ್ರೀಧರ್, ಸಾರಾಯಿ ಗುತ್ತಿಗೆದಾರರು ಇವರಾಗಲೀ ತನ್ನ ವಾಹನ ಚಾಲಕರಾಗಲೀ ವಾಹನ ದುರಸ್ತಿಯಲ್ಲಿದ್ದ ಬಗ್ಗೆ ಇಲಾಖೆಯ ಅಧಿಕಾರಿಗಳ ಗಮನಕ್ಕೆ ತರದೆ ಅನಧಿಕೃತವಾಗಿ ರಹದಾರಿಯಲ್ಲಿ ನಮೂದಿಸಿರುವ 8,000 ಲೀ. ಸಾರಾಯಿಗಿಂತ ಹೆಚ್ಚಿನ ಪ್ರಮಾಣದ ಸಾರಾಯಿಯನ್ನು (1,450 ಲೀ.) ಅವರ ಸ್ವ -ಇಚ್ಛೆಯಿಂದ ಹೊಂದಿ ವಾಹನ ಜಪ್ತಾದ ನಂತರ ಈ ವಿಷಯದ ಕುರಿತಾಗಿ ಲಿಖಿತ ಮೂಲಕ ತಿಳಿಸಿದ್ದನ್ನು ನಂಬಲು ಅನರ್ಹವೆಂದು ಈ ಪ್ರಾಧಿಕಾರಕ್ಕೆ ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಅಲ್ಲದೆ, ತಮ್ಮ ಇಚ್ಛಾನುಸಾರವಾಗಿ ಈ ರೀತಿಯ ವ್ಯವಸ್ಥೆಯನ್ನು ಮಾಡಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುವುದಿಲ್ಲ. ಹಾಗೂ ಡಿಸ್ಟಿಲರಿಯ ಅಬಕಾರಿ ಅಧೀಕ್ಷಕರು ಹೆಚ್ಚಿನ ಪ್ರಮಾಣದ ಮದ್ಯ ಡಿಸ್ಟಿಲರಿಯಲ್ಲಿಯೇ ಇತ್ತು ಎಂಬುದರ ಬಗ್ಗೆ ಯಾವುದೇ ಮಾಹಿತಿ ನೀಡಿರುವುದಿಲ್ಲ. ಆದ ಕಾರಣ ಈ ಪ್ರಕರಣದಲ್ಲಿ ರಹದಾರಿಯಲ್ಲಿ ನಮೂದಿಸಿರುವ ಪ್ರಮಾಣಕ್ಕಿಂತ 1,450 ಲೀ. ಸಾರಾಯಿಯನ್ನು ಹೆಚ್ಚಾಗಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ. ಮುಂದುವರಿದು, ಸದರಿ ವಾಹನದ ಮಾಲೀಕರಾಗಲೀ, ಏಜೆಂಟರಾಗಲೀ ಮತ್ತು ಅವರ ಪರ ವಕೀಲರಾಗಲೀ ವಾಹನ ತನ್ನದೆಂದು ಮಾಲೀಕತ್ವ ನಿರೂಪಿಸಲು ಯಾರೊಬ್ಬರೂ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿ.ಟಿ.ಸಿ.ಆರ್. 212/ 04-05, ದಿನಾಂಕ: 31ನೇ ಮೇ, 2005**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಸಿ) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಕೆಎ-23/ 2074 ನೋಂದಣಿ ಸಂಖ್ಯೆಯ ಲಾರಿ ವಾಹನವನ್ನು (9.450 ಲೀ. ಮಾದರಿ ಹೊರತುಪಡಿಸಿ ಉಳಿದ ಸಾರಾಯಿಯನ್ನು ದಿನಾಂಕ: 29.04.2006ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.) ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ವಾಹನದ ಹರಾಜಿನ ಬಗ್ಗೆ ಪ್ರತ್ಯೇಕ ಆದೇಶ ನೀಡಲಾಗುವುದು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

(ಈ ಆದೇಶವನ್ನು ಇಂದು ಅಂದರೆ 2006ನೇ ಇಸವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

**ಹೊನ್ನಪ್ಪ**
ಅಬಕಾರಿ ಅಧೀಕ್ಷಕರು ಹಾಗೂ
ಅಧಿಕೃತ ಅಧಿಕಾರಿಗಳು, ಇ.ಐ.ಬಿ.,
ಮೈಸೂರು-ಚಾಮರಾಜನಗರ ಜಿಲ್ಲೆ, ಮೈಸೂರು.

ಪಿ.ಆರ್.964

## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ

### ಪ್ರಕಟಣೆ

### ಸಂಖ್ಯೆ: ಅಧೀ/ ಕ.ಮಾ.ಹ.ಅ/ 01/ 2006-07, ದಿನಾಂಕ:12ನೇ ಜೂನ್, 2006

**ವಿಷಯ:** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ ಖಂಡ 3ರ ಉಪಖಂಡ (ಬಿ) ಅನುಸಾರ ಅನುಷ್ಠಾನದ ಬಗ್ಗೆ.

**ಉಲ್ಲೇಖ:** 1. ಸ.ಆ.ಸಂ: ಸಿಆಸುಇ. 14 ಮಾಹಾ 2003/ 16.10.2003.

2. ಸ.ಆ.ಸಂ: ಡಿಪಿಎಆರ್. 56 ಯೋಮಾಸ 2002(2) ದಿನಾಂಕ:18.07.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002 ಈಗಾಗಲೇ ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ ಪ್ರಕಾರ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2(ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಸಾರ್ವಜನಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಕಂಡ ಅಧಿಕಾರಿಗಳನ್ನು ನೇಮಿಸಲಾಗಿದೆ.

1. ಸಾರ್ವಜನಿಕ ಪ್ರಾಧಿಕಾರ : ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಹರಪನಹಳ್ಳೀ, ದಾವಣಗೆರೆ ಜಿಲ್ಲೆ.
2. ಸಕ್ಷಮ ಪ್ರಾಧಿಕಾರ : ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ.
3. ಅಪೀಲು ಪ್ರಾಧಿಕಾರ : ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ.

ಸರ್ಕಾರದ ಅಧಿನಿಯಮ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿರುವಂತೆ ಈ ಕೆಳಗೆ ತಿಳಿಸಿದಂತೆ 4 ಶೀರ್ಷಿಕೆಗಳಲ್ಲಿ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗೆ ತಿಳಿಯಪಡಿಸಲಾಗಿದೆ.

**ಶೀರ್ಷಿಕೆ-1:**

**ಇಲಾಖೆಯ ಸಂಘಟನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು:**

ತಾಲ್ಲೂಕು ಹಂತದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಕಛೇರಿಯು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಇಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಇವರು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಇವರಿಗೆ ಸಹಕರಿಸಲು ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

**ಅಧಿಕಾರಿಗಳು ಹಾಗೂ ಸಿಬ್ಬಂದಿಯ ವಿವರ:**

| | |
|---|---|
| 1. ಪತ್ರಾಂಕಿತ ವ್ಯವಸ್ಥಾಪಕರು | 1 ಹುದ್ದೆ. |
| 2. ಅಧೀಕ್ಷಕರು | 1 ಹುದ್ದೆ. |
| 3. ಶಿಕ್ಷಣ ಸಂಯೋಜಕರು | 5 ಹುದ್ದೆಗಳು. |
| 4. ತಾಲ್ಲೂಕು ದೈಹಿ ಸಂಯೋಜಕರು | 1 ಹುದ್ದೆ |
| 5. ಪ್ರಥಮ ದರ್ಜೆ ಸಹಾಯಕರು | 4 ಹುದ್ದೆಗಳು. |
| 6. ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ. |
| 7. ದ್ವಿ.ದ.ಸಹಾಯಕ. ಸಹಿತ ಬೆರಳಚ್ಚುಗಾರ | 1 ಹುದ್ದೆ. |
| 8. ಡಿ ದರ್ಜೆ ನೌಕರರು | 3 ಹುದ್ದೆಗಳು. |

**ಈ ಕಛೇರಿಯ ಅಧೀನದಲ್ಲಿ ಈ ಕೆಳಗಿನಂತೆ ಶಾಲೆಗಳು ಕಾರ್ಯನಿರ್ವಹಿಸುತ್ತಿವೆ.**

ಅ. ಸರ್ಕಾರಿ ಪದವಿಪೂರ್ವ ಕಾಲೇಜುಗಳು (ಪ್ರೌಢಶಾಲಾ ವಿಭಾಗ ಮಾತ್ರ).

ಆ. ಸರ್ಕಾರಿ ಪ್ರೌಢಶಾಲೆಗಳು.

ಇ. ಖಾಸಗಿ ಪ್ರೌಢಶಾಲೆಗಳು (ಅನುದಾನಿತ)

ಈ. ಸರ್ಕಾರಿ ಹಿರಿಯ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು (ಕನ್ನಡ ಹಾಗೂ ಉರ್ದು)

ಉ. ಖಾಸಗಿ ಹಿರಿಯ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು (ಅನುದಾನಿತ) (ಕನ್ನಡ ಮಾಧ್ಯಮ)

ಊ. ಖಾಸಗಿ ಪ್ರೌಢಶಾಲೆಗಳು (ಅನುದಾನ ರಹಿತ) (ಕನ್ನಡ, ಆಂಗ್ಲ ಹಾಗೂ ಉರ್ದು ಮಾಧ್ಯಮ)

ಋ. ಖಾಸಗಿ ಹಿರಿಯ ಹಾಗೂ ಕಿರಿಯ ಪ್ರಾಥಮಿಕ ಶಾಲೆಗಳು (ಅನುದಾನ ರಹಿತ) (ಕನ್ನಡ, ಆಂಗ್ಲ ಮಾಧ್ಯಮ).

**ಸರ್ವ ಶಿಕ್ಷ ಅಭಿಯಾನ ಕಛೇರಿಯಲ್ಲಿ ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.**

| | |
|---|---|
| 1. ಕ್ಷೇತ್ರ ಸಂಪನ್ಮೂಲ ಸಮನ್ವಯಾಧಿಕಾರಿ | 1 ಹುದ್ದೆ |
| 2. ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು | 5 ಹುದ್ದೆಗಳು |
| 3. ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳು | 14 ಹುದ್ದೆಗಳು |
| 4. ಕಿರಿಯ ಅಭಿಯಂತರ (ಗುತ್ತಿಗೆ ಆಧಾರ) | 1 ಹುದ್ದೆ |
| 5. ಡೇಟಾ ಎಂಟ್ರಿ ಆಪರೇಟರ್ (ಗುತ್ತಿಗೆ ಆಧಾರ) | 1 ಹುದ್ದೆ |

ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮಟ್ಟದವರೆಗೆ ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ ಶಿಕ್ಷಣ ಒದಗಿಸುವುದು ಇಲಾಖೆಯ ಗುರಿಯಾಗಿರುತ್ತದೆ. ತಾಲ್ಲೂಕು ಮಟ್ಟದ ಈ ಕಛೇರಿಯು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ನೀಡುವ ಶಿಕ್ಷಣ ಸಂಸ್ಥೆಗಳ ನಿಯಂತ್ರಣ ಹೊಂದಿರುತ್ತದೆ. ತಾಲ್ಲೂಕಿನ ಜಿಲ್ಲೆಯಲ್ಲಿನ ಒಂದು ಬಿ.ಆರ್.ಸಿ. ಕಛೇರಿ ಹಾಗೂ ಹದಿನಾಲ್ಕು ಕ್ಲಸ್ಟರ್ ಮಟ್ಟದ ಕಛೇರಿಗಳ ಮೂಲಕ ಸರ್ಕಾರದ ಯೋಜನೆಗಳನ್ನು ಶಾಲಾ ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

ಸರ್ಕಾರದ ಮುದ್ರಣಾಲಯದಿಂದ ಸರಬರಾಜುಮಾಡುವ ಪಠ್ಯಪುಸ್ತಕಗಳನ್ನು ಕ್ಲಸ್ಟರ್ ಸಂಪನ್ಮೂಲ ಕೇಂದ್ರಗಳ ಮೂಲಕ ಶಾಲೆಗಳಿಗೆ 1 ರಿಂದ 10ನೇ ತರಗತಿಯವರೆಗೆ ವಿತರಣೆ ಮಾಡಲಾಗುವುದು ಹಾಗೂ ಲೆಕ್ಕ ಪತ್ರ ನಿರ್ವಹಿಸಲಾಗುತ್ತಿದೆ.

**ಸಾಂಸ್ಥಿಕ ರಚನೆ**

ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ಕ್ಷೇತ್ರ ಯೋಜನಾ ಸಮನ್ವಯಾಧಿಕಾರಿಗಳು ಸರ್ವ ಶಿಕ್ಷ ಅಭಿಯಾನ ಹಾಗೂ ಪದನಿಮಿತ್ತ ಕ್ಷೇತ್ರ ಶಿಕ್ಷಣಾಧಿಕಾರಿಗಳು ಪಠ್ಯಪುಸ್ತಕ ಮಳಿಗೆ.

**ಶೀರ್ಷಿಕೆ-2:**

**ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು ಹಾಗೂ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕಾರ್ಯವಿಧಾನ:**

ಶೀರ್ಷಿಕೆ (1)ರಲ್ಲಿ ತಿಳಿಸಿರುವಂತೆ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಸಾರ್ವಜನಿಕ ಶಿಕ್ಷಣ ಇಲಾಖೆ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತಾಲ್ಲೂಕು ಮಟ್ಟದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಅಂತಿಮ ತೀರ್ಮಾನ ಕೈಗೊಳ್ಳುವ ಅಧಿಕಾರಿಯಾಗಿರುತ್ತಾರೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ, ಹರಪನಹಳ್ಳಿ ಇವರ ಕಛೇರಿಯಲ್ಲಿ ನಿರ್ವಹಿಸುವ ಪ್ರತಿಯೊಂದು ಕರ್ತವ್ಯಗಳು ಈ ಕೆಳಗಿನಂತಿವೆ.

**ಆಡಳಿತ ಶಾಖೆ:**

1. ಕಛೇರಿ ಸಿಬ್ಬಂದಿ/ ಅಧಿಕಾರಿಗಳ ಖಾಯಂಪೂರ್ವ ಸೇವಾ ಅವಧಿ ಘೋಷಣೆ, ವರ್ಗಾವಣೆ, ಬಡ್ತಿ, ಜೇಷ್ಠತಾಪಟ್ಟಿ, ನಿಯೋಜನೆ, ರಜಾ ಮಂಜೂರಾತಿ ನಿರ್ವಹಣೆ ಇತ್ಯಾದಿಗೆ ಪ್ರಸ್ತಾವನೆ ಸಲ್ಲಿಸುವುದು.
2. ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿ, ಜೇಷ್ಠತಾ ಪಟ್ಟಿ ಪ್ರಕಟಣೆ, ಬಡ್ತಿ, ವರ್ಗಾವಣೆ, ನಿಯೋಜನೆ ರಾಜೀನಾಮೆ ಇತ್ಯಾದಿ.
3. ಹೊಸ ಪ್ರಾಥಮಿಕ ಶಾಲೆಗಳ ಪ್ರಾರಂಭ, ಉನ್ನತೀಕರಣ ಇತ್ಯಾದಿಗೆ ಪ್ರಸ್ತಾವನೆ ಸಲ್ಲಿಸುವುದು.
4. ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಮೇಲಿನ ದೂರು/ ವಿಚಾರಣೆ/ ಶಿಸ್ತುಕ್ರಮ ಇತ್ಯಾದಿಗೆ ಪ್ರಸ್ತಾವನೆ ಸಲ್ಲಿಸುವುದು.
5. ಅನುಕಂಪದ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವುದು.
6. ಪ್ರಭಾರಿ ಹುದ್ದೆಯಲ್ಲಿ ನಿ-32, ನಿ-68, ರಂತೆ ನಿರ್ವಹಿಸಿದ ಅಧಿಕಾರಿ ನೌಕರರುಗಳ ಪ್ರಭಾರಿ ಭತ್ಯ ಮಂಜೂರಾತಿಗೆ ಪ್ರಸ್ತಾವನೆ ಸಲ್ಲಿಸುವುದು.
7. ಪ್ರಾಥಮಿಕ ಮತ್ತು ಪ್ರೌಢ ಶಾಲಾ ಶಿಕ್ಷಕರುಗಳಿಗೆ ಉನ್ನತ ವ್ಯಾಸಂಗಕ್ಕೆ ಅನುಮತಿ ನೀಡುವ ಬಗ್ಗೆ ಹಾಗೂ ಮೇಲಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸುವುದು.

**ಲೆಕ್ಕ ವಿಭಾಗ ಹಾಗೂ ಅನುದಾನ ಶಾಖೆ:**

1. ಕಛೇರಿ ಸಿಬ್ಬಂದಿ ವೇತನ, ಮುಂಗಡ ಕಟಾವಣೆ, ಇತ್ಯಾದಿ ಅಧಿಕಾರಿ ಸಿಬ್ಬಂದಿಯವರ ಕೆ.ಜಿ.ಐ.ಡಿ., ಜಿ.ಪಿ.ಎಫ್., ಮುಂಗಡಕ್ಕೆ ಮೇಲಾಧಿಕಾರಿಗಳಿಗೆ ಪ್ರಸ್ತಾವನೆಯನ್ನು ಸಲ್ಲಿಸುವುದು.
2. ಸಂಚಿತ ನಿಧಿ ಹಾಗೂ ವಿಶೇಷ ಬಿಲ್ಲುಗಳ ವೆಚ್ಚದ ಬಗ್ಗೆ ಹಾಗೂ ವಿಶೇಷ ಶುಲ್ಕದ ಆಯವ್ಯಯ ಸರ್ಕಾರೇತರ ನಗದು ವಹಿ, ಸರ್ಕಾರಿ ನಗದು ವಹಿ ನಿರ್ವಹಣೆ.
3. ಕಛೇರಿ ತಪಾಸಣೆ ಹಾಗೂ ಮಹಾಲೇಖಪಾಲರ ಆಡಿಟ್ ನಿರ್ವಹಣೆ, ಖಾಸಗಿ ಅನುದಾನಿತ ಶಾಲೆಗಳ ಆಯವ್ಯಯ ತಯಾರಿಕೆ, ಆಡಿಟ್ ವರದಿಗಳು.
4. ಎಲ್ಲಾ ಖಾಸಗಿ ಪ್ರಾಥಮಿಕ ಶಾಲೆಗಳ ನೇಮಕಾತಿ ಅನುಮೋದನೆ, ವರ್ಗಾವಣೆ, ಮಾನ್ಯತೆ ನವೀಕರಣ ಹೆಚ್ಚಿನ ವಿಭಾಗ ತೆರೆಯುವ ಬಗ್ಗೆ ಮೇಲಾಧಿಕಾರಿಗಳಿಗೆ ಶಿಫಾರಸ್ಸು ಮಾಡುವುದು ಇತ್ಯಾದಿಗೆ ಪ್ರಸ್ತಾವನೆ ಸಲ್ಲಿಸುವುದು.
5. ಕಛೇರಿ ಪೀಠೋಪಕರಣ, ಗ್ರಂಥಾಲಯ ದಾಸ್ತಾನು ನಿರ್ವಹಣೆ, ಕುಟುಂಬ ಕಲ್ಯಾಣ ಯೋಜನೆ.
6. ಅನುದಾನಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆ ಶಿಕ್ಷಕರ ಸಿಬ್ಬಂದಿಯವರ ವೇತನ ನಿಗಧಿ ಕಾಲಮಿತಿ ಬಡ್ತಿ ಇತ್ಯಾದಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಶಿಫಾರಸ್ಸು ಮಾಡುವುದು ಪ್ರಸ್ತಾವನೆ ಸಲ್ಲಿಸುವುದು.
7. ಅನುದಾನಿತ/ ಅನುದಾನರಹಿತ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಸಂಬಂಧಪಟ್ಟ ಇತರೆ ಕೆಲಸಗಳು.
8. ವಿದ್ಯಾರ್ಥಿಗಳಿಗೆ ಮಧ್ಯಾಹ್ನ ಉಪಹಾರ ಯೋಜನೆ, ಉಚಿತ ಸಮವಸ್ತ್ರ, ಶಾಲಾ ಬ್ಯಾಗುಗಳ ನಿರ್ವಹಣೆ, ಬಾಲಕಾರ್ಮಿಕರ ಕಡತ ನಿರ್ವಹಣೆ.
9. ಪ್ರಾಥಮಿಕ ಶಾಲಾ ಶಿಕ್ಷಕರ ಹಾಗೂ ಇತರೆ ನೌಕರರ ಸಾಲ, ಸಾಮಾನ್ಯ ಭವಿಷ್ಯನಿಧಿ ಮಂಜೂರಾತಿ ಬಗ್ಗೆ ನಿರ್ವಹಣೆ.

**ಯೋಜನೆ ಶಾಖೆ, ಅಭಿವೃದ್ಧಿ ಶಾಖೆ:**

1. ಶಿಕ್ಷಕರ ಕಾರ್ಯಕ್ರಮಗಳು ಹಾಗೂ ಶಾಲಾಭಿವೃದ್ಧಿ ಮತ್ತು ಉಸ್ತುವಾರಿ ಸಮಿತಿಗಳ ರಚನೆ.
2. ಎಲ್ಲಾ ನೌಕರರ/ ವಿದ್ಯಾರ್ಥಿಗಳ ಜನ್ಮದಿನಾಂಕ, ಜಾತಿ, ಹೆಸರು ಬದಲಾವಣೆ ಪ್ರಕರಣಗಳಿಗೆ ಸಂಬಂಧಪಟ್ಟ ನ್ಯಾಯಾಲಯ ಪ್ರಕರಣಗಳ ಪರಿಶೀಲನೆ.
3. ಡಿ.ಎಸ್.ಇ.ಆರ್.ಟಿ. ಪುಸ್ತಕ ಹಾಗೂ ಕ್ಯಾಸೆಟ್ ಸರಬರಾಜು, ವಿಜ್ಞಾನಕೇಂದ್ರ, ಸಗಟು ಖರೀದಿ ಕಾರ್ಯಕ್ರಮ, ಶಿಕ್ಷಕರ ತರಬೇತಿಗೆ ನಿಯೋಜನೆ.
4. ಹೊರದೇಶ, ಹೊರರಾಜ್ಯ, ಕೇಂದ್ರ ಮಾದರಿ ಶಾಲೆಗಳಿಂದ ಬಂದಿರುವ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಶಾಲಾ ದಾಖಲಾತಿಗೆ ಅನುಮತಿ.
5. ಯೋಜನೆ/ ಯೋಜನೇತರ ಆಯವ್ಯಯ, ಅನುದಾನ ಹಂಚಿಕೆ, ಕಛೇರಿ ಸಾದಿಲ್ವಾರು, ಖರ್ಚಿನ ತಃಖ್ತೆ.
6. ಎಸ್.ಎಸ್.ಎಲ್.ಸಿ. ಮತ್ತು ಇತರೆ ಪರೀಕ್ಷೆಗಳು.
7. ಎಲ್ಲಾ ಸರ್ಕಾರಿ ಪ್ರಾಥಮಿಕ ಶಾಲೆಗಳ ವೇತನ ಬಿಲ್ಲುಗಳಿಗೆ ವಿಳಂಬ ವಿನಾಯತಿ, ಎಲ್ಲಾ ಸಿಬ್ಬಂದಿಗಳ ಪ್ರಯಾಣ ಭತ್ಯೆ ಬಿಲ್ಲುಗಳ ಮೇಲು ಸಹಿ, ವೈದ್ಯಕೀಯ ವೆಚ್ಚ ಮರುಪಾವತಿ, ವಿದ್ಯಾರ್ಥಿವೇತನ, ರಜಾ ಪ್ರಯಾಣ ಹಾಗೂ ಇತರೆ ಪ್ರಯಾಣ ಸೌಲಭ್ಯಗಳ ಪ್ರಸ್ತಾವನೆಗಳ ಪರಿಶೀಲನೆ.
8. ಎಲ್ಲಾ ಸರ್ಕಾರಿ ಸಂಸ್ಥೆಗಳ ಕಟ್ಟಡಗಳ ನಿರ್ಮಾಣ ಹಾಗೂ ದುರಸ್ಥಿ, ಕುಡಿಯುವ ನೀರು, ಶೌಚಾಲಯ, ಜಮೀನು ಭೂಸ್ವಾಧೀನತೆ ಇತ್ಯಾದಿ.
9. ಸರ್ಕಾರಿ ಕಟ್ಟಡಗಳ ಬಾಡಿಗೆ ನಗದೀಕರಣ ಹಾಗೂ ವಾರ್ಷಿಕ ಬಾಡಿಗೆ ನಿಗದಿಪಡಿಸುವಿಕೆಗೆ ಪ್ರಸ್ತಾವನೆ ಸಲ್ಲಿಸುವುದು.
10. ಪಿಂಚಣಿ ನಿರ್ವಹಣೆ.

11. ವಾರ್ಷಿಕ ಯೋಜನೆ ಕರಡು ಹಾಗೂ ವಾರ್ಷಿಕ ಯೋಜನೆಯ ಕ್ರಿಯಾ ಯೋಜನೆ ತಯಾರಿ, ಯೋಜನೆಗಳ ಅನುಷ್ಠಾನದಲ್ಲಿ ಪ್ರಾಥಮಿಕ/ ಪ್ರೌಢ ಶಾಲೆಗಳಿಗೆ ಪೀಠೋಪಕರಣ ಹಾಗೂ ಕಲಿಕಾ ಸಾಮಗ್ರಿ, ಸಾಧನ ಸಾಮಗ್ರಿ ಸರಬರಾಜು, ಜಿಲ್ಲಾ ಯೋಜನೆಗಳ ಸ್ವೀಕಾರ/ ವಿತರಣೆ.
12. ಯೋಜನೆಯಡಿ ಬರುವ ಪ್ರೌಢ ಶಾಲೆಗಳ ಸಾದಿಲ್ವಾರು ಬಿಲ್ಲು ಮೇಲು ಸಹಿ, ಶಿಕ್ಷಕರಿಗೆ ವೇತನ ಬಿಡುಗಡೆ, ಎಂ.ಎಂ.ಆರ್. ಮಾಹಿತಿ ಒದಗಿಸುವುದು.

**ಸರ್ವ ಶಿಕ್ಷ ಅಭಿಯಾನ:**

ಸರ್ವ ಶಿಕ್ಷ ಅಭಿಯಾನ ಯೋಜನೆಯಡಿ ಈ ಕೆಳಗಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

1. ಪ್ರಾಥಮಿಕ ಶಿಕ್ಷಣ ಸಾರ್ವತ್ರೀಕರಣವನ್ನು 2010ರ ವೇಳೆಗೆ 6-14 ವಯೋಮಾನದ ಎಲ್ಲಾ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡುವುದು.
2. ಈ ಕಾರ್ಯಕ್ರಮದಡಿ ಎಲ್ಲಾ ಶಾಲೆಗಳಿಗೆ ಮೂಲಭೂತ ಸೌಕರ್ಯಗಳಾದ ಶಿಕ್ಷಕರು, ಕೊಠಡಿ, ಕಲಿಕಾ ಸಾಮಗ್ರಿ, ನೀರು ಮತ್ತು ಶೌಚಾಲಯ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸುವುದು.
3. ಶಾಲೆಗಳಿಂದ ಹೊರಗುಳಿದ ಮಕ್ಕಳಿಗೆ ವಿಶೇಷ ಕಾರ್ಯಕ್ರಮಗಳ ಮೂಲಕ ಎಲ್ಲಾ ಮಕ್ಕಳು ಶಿಕ್ಷಣ ಪಡೆಯುವ ಯೋಜನೆ ಹಮ್ಮಿಕೊಳ್ಳಲಾಗಿದೆ.

**ಪಠ್ಯ ಪುಸ್ತಕ ಮಳಿಗೆ:**

1. 1 ರಿಂದ 10ನೇ ತರಗತಿವರೆಗಿನ ವಿದ್ಯಾರ್ಥಿಗಳಿಗೆ ಉಚಿತ ಪುಸ್ತಕ ಸರಬರಾಜು ಮಾಡುವುದು.

**ಗಣಕ ವಿಭಾಗ:**

1. ಎಲ್ಲಾ ಸರ್ಕಾರಿ ಹಾಗೂ ಸರ್ಕಾರೇತರ ಪತ್ರಗಳನ್ನು ಗಣಕಯಂತ್ರದಲ್ಲಿ ದಾಖಲು ಮಾಡುವುದು.
2. ಎಲ್ಲಾ ಮಾಸಿಕ ಹಾಗೂ ಅರ್ಧವಾರ್ಷಿಕ ನಿಯತಕಾಲಿಕೆಗಳನ್ನು, ಸಂಬಳಬಿಲ್ಲು, ಆಯವ್ಯಯ ಹಾಗೂ ಇತರೆ ಮಾಹಿತಿಯನ್ನು ಗಣಕಯಂತ್ರಕ್ಕೆ ಅಳವಡಿಸುವುದು.

**ಬೆರಳಚ್ಚು ವಿಭಾಗ:**

1. ಕಛೇರಿಯಿಂದ ಹೊರಡಿಸುವ ಪತ್ರಗಳನ್ನು ಹಾಗೂ ಇತರೆ ಮಾಹಿತಿಯನ್ನು ಬೆರಳಚ್ಚುಮಾಡುವುದು.

**ದೈಹಿಕ ಶಿಕ್ಷಣ ವಿಭಾಗ:**

1. ಇಲಾಖೆ ವತಿಯಿಂದ ನಡೆಯುವ ಎಲ್ಲಾ ಸ್ಪರ್ಧೆಗಳು ಹಾಗೂ ಕ್ರೀಡೆಗೆ ಸಂಬಂಧಿಸಿದ ಕಾರ್ಯಕ್ರಮಗಳು.

**ಸ್ವೀಕೃತಿ ಮತ್ತು ರವಾನೆ:**

ಕಛೇರಿಗೆ ಬರುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ವಿಭಾಗದಲ್ಲಿ ಸ್ವೀಕರಿಸಿ ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಪಡೆದು ನಂತರ ಪತ್ರಗಳನ್ನು ನೊಂದಾಯಿಸಿ ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ನೀಡಿ ಸ್ವೀಕೃತಿ ಪಡೆಯುವುದು.

ಕಛೇರಿಯಿಂದ ರವಾನೆಯಾಗುವ ಎಲ್ಲಾ ಟಪಾಲುಗಳನ್ನು ರವಾನೆ ವಿಭಾಗದಲ್ಲಿ ದಾಖಲಿಸಿ ನಿಗದಿತ ಅಂಚೆ ಚೀಟಿ ಅಂಟಿಸಿ ರವಾನೆ ಮಾಡಲಾಗುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆಯ ವಿವರಗಳು:**

ಕಛೇರಿ ಸಿಬ್ಬಂದಿವರ್ಗದವರು ಸಂಬಂಧಿಸಿದ ಅಧಿಕಾರಿಗಳ ವ್ಯಾಪ್ತಿಯ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು. ಸಾರ್ವಜನಿಕರಿಂದ, ಮೇಲಾಧಿಕಾರಿಗಳ ಕಛೇರಿಯಿಂದ ಹಾಗೂ ಅಧೀನ ಅಧಿಕಾರಿಗಳಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ, ಸಂಬಂಧಿಸಿದ ಅಧಿಕಾರಿಗಳ ಹಾಗೂ ಕಛೇರಿ ಅಧೀಕ್ಷಕರ ಕಿರು ಸಹಿ ಮಾಡಿಸಿದ ನಂತರ ಸದರಿ ಪತ್ರಗಳನ್ನು ನೊಂದಾಯಿಸಿ ಸಂಬಂಧಪಟ್ಟ ವಿಷಯ ನಿರ್ವಾಹಕರಿಗೆ ಸ್ವೀಕೃತಿ ಪಡೆದು ನೀಡಲಾಗುವುದು. ತುರ್ತು ಟಪಾಲುಗಳ ಬಗ್ಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆಗಾಗಿ ಅಥವಾ ಮಂಜೂರಾತಿಗಾಗಿ ಕ್ರಮಕೈಗೊಳ್ಳುವರು.

**ಶೀರ್ಷಿಕೆ 3:**

**ಇಲಾಖೆಯು ತನ್ನ ಪ್ರಕಾರ್ಯಗಳನ್ನು ನಿರ್ವಹಿಸುವಲ್ಲಿ ರೂಪಿಸಿರುವ ಗುಣಮಟ್ಟಗಳು**

1. ಕಛೇರಿಯಲ್ಲಿ ಸ್ವೀಕರಿಸುವ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ನೊಂದಾಯಿಸಿ, ಆ ದಿನವೇ ವಿಷಯ ನಿರ್ವಾಹಕರಿಗೆ ನೀಡುವಂತಹ ವ್ಯವಸ್ಥೆ ಹಾಗೂ ನಿಗದಿತ ಅವಧಿಯೊಳಗೆ ಇತ್ಯರ್ಥಪಡಿಸುವುದು.
2. ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಮಾಡಲು ಕ್ಷೇತ್ರ ಸಂಪನ್ಮೂಲ ಅಧಿಕಾರಿಗಳ ಹಾಗೂ ಸಿ.ಆರ್.ಪಿ.ಗಳ ಮಾಸಿಕ ಸಭೆ ಹಾಗೂ ಕಛೇರಿ ಸಿಬ್ಬಂದಿಯ ಮಾಸಿಕ ಸಭೆ ಏರ್ಪಡಿಸುವುದು.
3. ಆಗಿಂದಾಗ್ಗೆ ಪತ್ರಾಂಕಿತ ವ್ಯವಸ್ಥಾಪಕರು ಹಾಗೂ ಅಧೀಕ್ಷಕರುಗಳಿಂದ ವಿಷಯ ನಿರ್ವಾಹಕರ ಮೇಜು ತಪಾಸಣಾ ಕಾರ್ಯ.
4. ಇಲಾಖೆಯ ಸಿಬ್ಬಂದಿ ವರ್ಗದವರನ್ನು ಜಿಲ್ಲಾ ತರಬೇತಿ ಸಂಸ್ಥೆಯಲ್ಲಿ ತರಬೇತಿಗೆ ನಿಯೋಜಿಸುವುದು.
5. ಸರ್ಕಾರವು/ ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ಪಾಲಿಸುವುದು.
6. ಸಾರ್ವಜನಿಕ ಕುಂದು ಕೊರತೆಗಳ ನಿವಾರಣೆಯ ಬಗ್ಗೆ ಸೂಕ್ತ ಕ್ರಮಕೈಗೊಳ್ಳುವುದು.
7. ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಮೂಲಕ ಇಲಾಖೆಯಲ್ಲಿನ ಅಧಿಕಾರಿಗಳ ಮತ್ತು ನೌಕರರ ಕಾರ್ಯನಿರ್ವಹಣೆಯನ್ನು ಮೌಲ್ಯಮಾಪನ ಮಾಡುವುದು.

**ಶೀರ್ಷಿಕೆ 4:**

**ಮಾಹಿತಿಯನ್ನು ಪಡೆಯುವುದಕ್ಕಾಗಿ ನಾಗರೀಕರಿಗೆ ದೊರೆಯಬಹುದಾದ ಅನುಕೂಲತೆಯ ವಿವರಗಳು**

1. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ರಿತ್ಯಾ ತಾಲ್ಲೂಕು ಮಟ್ಟದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾಶಿಇ, ಹರಪನಹಳ್ಳಿ ಇವರನ್ನು ಸಕ್ಷಮ ಪ್ರಾಧಿಕಾರಿಯಾಗಿ ಹಾಗೂ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಜಿಲ್ಲೆ ಇವರನ್ನು ಮೇಲ್ಮನವಿ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿದೆ.

